KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಫೆಬ್ರವರಿ ೨೪, ೨೦೧೧, (ಫಾಲ್ಗುಣ ೫, ಶಕ ವರ್ಷ ೧೯೩೨) | ಸಂಚಿಕೆ ೮ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀಮತಿ ಜಯಶ್ರೀ ಎಸ್. ಶೆಣೈ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿ.ವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಟಿ.ನರಸೀಪುರ ಇವರಿಗೆ ಆಯ್ಕೆಕಾಲಿಕ ವೇತನ ಶ್ರೇಣಿಯನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಅಧಿಸೂಚನೆ ಸಂ:ಲಾ 97 ಪಿಪಿಇ 97, ದಿನಾಂಕ: 29.01.1998,
2) ಸರ್ಕಾರದ ಆದೇಶ ಸಂ:ಲಾ 172 ಪಿಪಿಇ 2001, ದಿನಾಂಕ: 30.05.2001,
3) ಸರ್ಕಾರದ ಆದೇಶ ಸಂಖ್ಯೆ:ಲಾ 232 ಪಿಪಿಇ 2002, ದಿನಾಂಕ: 19.02.2003,
4) ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ಕಛೇರಿಯ ಆದೇಶ ಸಂ:ಡಿಪಿಎನ್/ಆದಾ/12/2003–04, ದಿನಾಂಕ: 29.05.2006,
5) ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ಕಛೇರಿಯ ಆದೇಶ ಸಂ:ಡಿಪಿಎನ್/ಸಿಶಾ–1/198/27/2007–08, ದಿನಾಂಕ: 06.11.2009,
6) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ.ಡಿಪಿಎನ್/ಸಿಶಾ.1 /198(27)/2007–08, ದಿನಾಂಕ: 18.02.2009.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ದಿನಾಂಕ: 29.01.1998ರ ಸರ್ಕಾರದ ಅಧಿಸೂಚನೆಯ ಕ್ರ.ಸಂ:27ರನ್ವಯ ಶ್ರೀಮತಿ ಜಯಶ್ರೀ ಎಸ್. ಶೆಣೈ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿ.ವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಟಿ.ನರಸೀಪುರ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಮೂಲಕ ಆಯ್ಕೆಯಾಗಿ, ದಿನಾಂಕ: 13.02.1998ರ ಪೂರ್ವಾಹ್ನ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ.

ಮೇಲೆ (2) ರಲ್ಲಿ ಓದಲಾದ ದಿನಾಂಕ: 30.05.2001ರ ಸರ್ಕಾರದ ಆದೇಶದನ್ವಯ ಶ್ರೀಮತಿ ಜಯಶ್ರೀ ಎಸ್. ಶೆಣೈರವರು ದಿನಾಂಕ: 13.02.2000ರಂದು ಪರಿವೀಕ್ಷಣಾವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಲಾಗಿದೆ.

ಮೇಲೆ (3)ರಲ್ಲಿ ಓದಲಾದ ದಿನಾಂಕ: 19.02.2003ರ ಸರ್ಕಾರದ ಆದೇಶದನ್ವಯ ಶ್ರೀಮತಿ ಕೆ.ಆರ್. ಜಯಶ್ರೀರವರ ಹೆಸರನ್ನು ಶ್ರೀಮತಿ ಜಯಶ್ರೀ ಎಸ್. ಶೆಣೈ ಎಂದು ಬದಲಾಯಿಸಿ ನಾಮನಿರ್ದೇಶನ ಮಾಡಿರುತ್ತದೆ.

ಮೇಲೆ (6)ರಲ್ಲಿ ಓದಲಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ದಿನಾಂಕ: 18.02.2009ರ ಪತ್ರದಲ್ಲಿ, ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯನ್ವಯ ಹಾಗೂ (2) ಮತ್ತು (3)ರ ಆದೇಶಗಳ ಹಿನ್ನೆಲೆಯಲ್ಲಿ, ಶ್ರೀಮತಿ ಜಯಶ್ರೀ ಎಸ್. ಶೆಣೈ ರವರು ದಿನಾಂಕ: 13.02.1998 ರಿಂದ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ 10 ವರ್ಷಗಳ ನಿರಂತರ ಸೇವೆಯನ್ನು ಯಾವುದೇ ಮುಂಬಡ್ತಿ ಇಲ್ಲದೇ ಪೂರೈಸಿರುತ್ತಾರೆ. ಸದರಿ ಅಧಿಕಾರಿಗೆ ಈ ಹಿಂದೆ ಬಡ್ತಿಯನ್ನು ನೀಡಿರುವುದಿಲ್ಲ ಅಥವಾ ಸದರಿ ಅಧಿಕಾರಿಯು ಬಡ್ತಿಯನ್ನು ನಿರಾಕರಿಸಿರುವುದಿಲ್ಲ. ಸದರಿ ಹುದ್ದೆಗೆ ನಿಗದಿಪಡಿಸಿದ್ದ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣತೆಯನ್ನು ಹೊಂದಿದ್ದರಿಂದ, ಸದರಿಯವರು ಪರಿವೀಕ್ಷಣಾವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಲಾಗಿದೆ. ಸದರಿ ಅಧಿಕಾರಿಯ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಪ್ರಸ್ತುತ ಬಾಕಿ ಇರುವುದಿಲ್ಲ ಅಥವಾ ಹೂಡುವ ಸಂಭವವಿರುವುದಿಲ್ಲ. ಆದರೆ, ಮೇಲೆ (3) ಮತ್ತು (4) ರಲ್ಲಿ ಓದಲಾದ ಇಲಾಖೆಯ ನಿರ್ದೇಶಕರ ಕಛೇರಿ ಆದೇಶಗಳನ್ವಯ ಸದರಿಯವರ ವಿರುದ್ಧ ಇಲಾಖಾ ವಿಚಾರಣೆ ನಡೆದು, ದಿನಾಂಕ: 29.05.2006 ಮತ್ತು ದಿನಾಂಕ: 06.11.2009 ರಂದು ವಾಗ್ದಂಡನೆಯನ್ನು ವಿಧಿಸಲಾಗಿದ್ದು, ದಂಡನೆಯು ಕೊನೆಗೊಂಡಿರುತ್ತದೆ. ಆದ್ದರಿಂದ, ಕರ್ನಾಟಕ ನಾಗರೀಕ ಸೇವಾ (ಕಾಲಬದ್ಧ ಬಡ್ತಿ) ನಿಯಮಗಳು, 1983ರನ್ವಯ ಆಯ್ಕೆ ಕಾಲಿಕ ವೇತನ ಶ್ರೇಣಿಯ ಮಂಜೂರಾತಿ ಸೌಲಭ್ಯಕ್ಕೆ ಅರ್ಹರಿದ್ದು, ಶ್ರೀಮತಿ ಜಯಶ್ರೀ ಎಸ್. ಶೆಣೈರವರಿಗೆ ದಿನಾಂಕ: 13.02.2008 ರಿಂದ ಜಾರಿಗೆ ಬರುವಂತೆ ರೂ.12000–300–12300–350–14400–400–16800–450–19500–525–22650ರ ಆಯ್ಕೆ ಕಾಲಿಕ ವೇತನ ಶ್ರೇಣಿಯನ್ನು ಮಂಜೂರು ಮಾಡಿ, ಕಾಲಕಾಲಕ್ಕೆ ಮೂಲ ವೇತನವನ್ನು ನಿಗದಿ ಪಡಿಸಿ ಸರ್ಕಾರಿ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

ದಿನಾಂಕ: 13.02.2008ಕ್ಕೆ ನಿಕಟಪೂರ್ವ 5 ವರ್ಷಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ಯಾವುದೇ ಪ್ರತಿಕೂಲ ಷರಾ ಇರುವುದಿಲ್ಲ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ಒಇ 142 ಪಿಪಿಇ 2009, ಬೆಂಗಳೂರು, ದಿನಾಂಕ : 13ನೇ ಅಕ್ಟೋಬರ್ 2010**

ಪ್ರಸ್ತಾವನೆಯಲ್ಲಿನ ಅಂಶಗಳ ಹಿನ್ನಲೆಯಲ್ಲಿ, ಶ್ರೀಮತಿ ಜಯಶ್ರೀ ಎಸ್. ಶೆಣೈ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿ.ವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಟಿ.ನರಸೀಪುರ ರವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ (ವೇತನ ಶ್ರೇಣಿ ರೂ.11400–21600) ದಿನಾಂಕ: 13.02.1998 ರಿಂದ 12.02.2008ರವರೆಗೆ 10 ವರ್ಷಗಳ ನಿರಂತರ ಸೇವೆಯನ್ನು ಯಾವುದೇ ಮುಂಬಡ್ತಿಯಿಲ್ಲದೇ ಪೂರೈಸಿರುವುದರಿಂದ ಕರ್ನಾಟಕ ನಾಗರೀಕ ಸೇವೆಗಳು (ಕಾಲಬದ್ಧ ಬಡ್ತಿ) ನಿಯಮಗಳು 1983ರ ಹಾಗೂ ಸರ್ಕಾರದ ಆದೇಶ ಸಂ: ಎಫ್‌ಡಿ 17 ಎಸ್‌ಆರ್‌ಪಿ 2007, ದಿನಾಂಕ: 16.05.2007ರ ನಿಯಮ 4(3) ಮತ್ತು 15ರನ್ವಯ ದಿನಾಂಕ: 13.02.2008 ರಿಂದ ಅನ್ವಯಿಸುವಂತೆ ರೂ.11400–300–12300–350–14400–400–16800–450–19500–525–21600ರ ವೇತನ ಶ್ರೇಣಿಯಿಂದ ಆಯ್ಕೆ ಕಾಲಿಕ ವೇತನ ಶ್ರೇಣಿಯಾದ ರೂ.12000–300–12300–350–14400–400–16800–450–19500–525–22650ರ ವೇತನ ಶ್ರೇಣಿಯನ್ನು ಮಂಜೂರು ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

ಪಿ.ಆರ್. 2632

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಹೆಚ್. ಕೃಷ್ಣಮೂರ್ತಿ, ಹೆಚ್.ಸಿ., ಸುಬ್ರಮಣ್ಯನಗರ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಪೊಲೀಸ್ ಕಮೀಷನರ್ (ಕಾ & ಸು) ಪೂರ್ವ, ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ: 36/ಡಿ ಇ:ಆರ್–6:85 ದಿ: 09–9–86
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ: ಅಪೀಲು/57/86–87 ದಿನಾಂಕ: 04–6–87
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 25–8–2009
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)34/2009–10 ದಿನಾಂಕ: 27–4–2010
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 116 ಸಿಎನ್‌ಎಸ್ 10 ದಿನಾಂಕ: 24–9–2010

**ಪ್ರಸ್ತಾವನೆ :**

ಶ್ರೀ ಹೆಚ್.ಕೃಷ್ಣಮೂರ್ತಿ, ಹೆಚ್.ಸಿ., ಸುಬ್ರಮಣ್ಯನಗರ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರು ಚಾಮರಾಜಪೇಟೆ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಕಾನ್ಸ್‌ಟೇಬಲ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯ ಲೋಪ ಮತ್ತು ಅಶಿಸ್ತಿನಿಂದ ವರ್ತಿಸಿರುವ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ :**

1) "ದಿನಾಂಕ: 30–3–85 ರಂದು ಗಂಟೆ 22–25 ಮತ್ತು 23–05 ರಲ್ಲಿ ಶ್ರೀ ಕೆ.ಜಿ. ಭೀಮನಾಯ್ಕ, ಪಿ.ಎಸ್.ಐ., ಚಾಮರಾಜಪೇಟೆ ಪೊಲೀಸ್ ಠಾಣೆ ಇವರು ತಪಾಸಣೆ ಮಾಡಿದಾಗ ನೀವು ನಿಮ್ಮ ರಾತ್ರಿ ಗಸ್ತು ಕರ್ತವ್ಯವನ್ನು ತ್ಯಜಿಸಿ, ನಳಂದ ಚಿತ್ರಮಂದಿರದಲ್ಲಿ ಚಲನಚಿತ್ರ ಒಂದನ್ನು ವೀಕ್ಷಿಸುತ್ತಿದ್ದ ಕರ್ತವ್ಯಲೋಪ.
2) ದಿನಾಂಕ: 30–3–85 ರಂದು ಸಮಯ 23–05ರಲ್ಲಿ ಶ್ರೀ ಕೆ.ಜಿ. ಭೀಮನಾಯ್ಕ, ಪಿ.ಎಸ್.ಐ. (ಕಾನೂನು ಮತ್ತು ಸುವ್ಯವಸ್ಥೆ) ಚಾಮರಾಜಪೇಟೆ ಆರಕ್ಷಕ ಠಾಣೆ, ಇವರು ನೀವು ಗಸ್ತು ಕೆಲಸವನ್ನು ನಿರ್ಲಕ್ಷಿಸಿ ಚಲನಚಿತ್ರ ಒಂದನ್ನು ವೀಕ್ಷಿಸುತ್ತಿದ್ದನ್ನು ಪ್ರಶ್ನಿಸಿದಾಗ ಅವರೊಡನೆ ಅಶಿಸ್ತಿನಿಂದ ವರ್ತಿಸಿರುವ ಆರೋಪ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಡೆಪ್ಯೂಟಿ ಪೊಲೀಸ್ ಕಮೀಷನರ್ (ಕಾ & ಸು) ಪೂರ್ವ, ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 09–9–86ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವೇತನ ಬಡ್ತಿಗಳಿಗೆ ದಕ್ಕೆಯಾಗುವಂತೆ ಎರಡು ವರ್ಷಗಳ ಕಾಲ ತಡೆಹಿಡಿಯುವ ದಂಡನೆಯನ್ನು ವಿಧಿಸಲಾಗಿದೆ. ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 04–6–87ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ವಿಧಿಸಿದ ದಂಡನೆಯು ಆರೋಪಕ್ಕನುಗುಣವಾಗಿಲ್ಲವೆಂದು ಸರ್ಕಾರವು ಪರಿಗಣಿಸಿ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 149 ಪೊಸಿಅ 2009 ಬೆಂಗಳೂರು, ದಿನಾಂಕ : 12-10-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹೆಚ್. ಕೃಷ್ಣಮೂರ್ತಿ, ಹೆಚ್.ಸಿ., ಸುಬ್ರಮಣ್ಯನಗರ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರಿಗೆ ಶಿಸ್ತು ಪ್ರಾಧಿಕಾರವು ದಿನಾಂಕ: 09-9-86ರ ಆದೇಶದಲ್ಲಿ ವಿಧಿಸಿದ ದಂಡನೆಯನ್ನು ಭಾಗಶಃ ಮಾರ್ಪಡಿಸಿ ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ರಹಿತವಾಗಿ ಆರು ತಿಂಗಳ ಕಾಲ ಮುಂದೂಡಿ ಆದೇಶಿಸಿದೆ. ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 2633

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಬಿ. ಸಿದ್ದರಾಮಯ್ಯ, ಎ.ಪಿ.ಸಿ., ಸಶಸ್ತ್ರ ಪೊಲೀಸ್ ತರಬೇತಿ ಶಾಲೆ, ಯಲಹಂಕ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರಿ ಹಾಗೂ ಪ್ರಾಚಾರ್ಯರು, ಸಶಸ್ತ್ರ ಪೊಲೀಸ್ ತರಬೇತಿ ಶಾಲೆ, ಯಲಹಂಕ, ಬೆಂಗಳೂರು, ಇವರ ಆದೇಶ ಸಂಖ್ಯೆ: ಸಪೊತಶಾ/ಇಲಾಖಾ ತನಿಖೆ 1/2005-06 ದಿ: 15-9-2005
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಉಪ ಮಹಾ ನಿರೀಕ್ಷಕರು, (ತರಬೇತಿ) ಬೆಂಗಳೂರು, ಇವರ ಆದೇಶ ಸಂಖ್ಯೆ: ತ1ಸಿಬ್ಬಂದಿ/141-2005-06 ಓ.ಬಿ. ಸಂ: 9/09 ದಿನಾಂಕ: 27-5-2009
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 10-8-2009
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)33/2009-10 ದಿನಾಂಕ: 22-7-2010
3) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 129 ಸಿಎನ್‌ಎಸ್ 10 ದಿನಾಂಕ: 24-9-2010

**ಪ್ರಸ್ತಾವನೆ :**

ಶ್ರೀ ಬಿ. ಸಿದ್ದರಾಮಯ್ಯ, ಎ.ಪಿ.ಸಿ., ಇವರು ಸಶಸ್ತ್ರ ಪೊಲೀಸ್ ತರಬೇತಿ ಶಾಲೆ, ಯಲಹಂಕ, ಬೆಂಗಳೂರು, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಅಶಿಸ್ತು ಮತ್ತು ದುರ್ನಡತೆಯನ್ನು ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7 ರಡಿ ದೋಷಾರೋಪಣೆಯನ್ನು ಹೊರಡಿಸಿ, ಅರ್ಜಿದಾರರ ಸಮಜಾಯಿಷಿಯನ್ನು ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪ್ರಾಚಾರ್ಯರು, ಸಶಸ್ತ್ರ ಪೊಲೀಸ್ ತರಬೇತಿ ಶಾಲೆ, ಯಲಹಂಕ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 15-9-2005ರ ಆದೇಶದಲ್ಲಿ ಇವರ ವಾರ್ಷಿಕ ವೇತನ ಬಡ್ತಿಯನ್ನು ಮೂರು ವರ್ಷಗಳ ಕಾಲ ತದನಂತರದ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಮುಂದೂಡಿದ್ದಾರೆ. ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಿದ್ದಾರೆ. ಶಿಸ್ತು ಪ್ರಾಧಿಕಾರದ ಆದೇಶದ ವಿರುದ್ಧ ಮೇಲ್ಮನವಿ ಪ್ರಾಧಿಕಾರಕ್ಕೆ ಮೇಲ್ಮನವಿಯನ್ನು ಸಲ್ಲಿಸಿದ್ದಾರೆ. ಮೇಲ್ಮನವಿ ಪ್ರಾಧಿಕಾರವು ಆರೋಪವು ಅತ್ಯಂತ ಗಂಭೀರ ಸ್ವರೂಪವಾಗಿರುವುದೆಂದು ಪರಿಗಣಿಸಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :**

> "ಶ್ರೀ ಬಿ. ಸಿದ್ದರಾಮಯ್ಯ, ಆರಕ್ಷಕ ಪೇದೆ 4, ಶಸ್ತ್ರಕಾರ, ಸಶಸ್ತ್ರ ಪೊಲೀಸ್ ತರಬೇತಿ ಶಾಲೆ, ಯಲಹಂಕ, ಬೆಂಗಳೂರು, ಆದ ನೀವು ದಿ: 12-05-2005 ರಂದು ಬೆಳಗ್ಗೆ ಸಮಯ ಸುಮಾರು 08-25 ಗಂಟೆಯಲ್ಲಿ ಸಶಸ್ತ್ರ ಪೊಲೀಸ್ ತರಬೇತಿ ಶಾಲೆಯ ಕಛೇರಿಯಲ್ಲಿ ಅನುಯಾಯಿ ಕೆಲಸ ಮಾಡುತ್ತಿರುವ ಶ್ರೀಮತಿ ಭಾಗ್ಯಲಕ್ಷ್ಮಿರವರು ಒಬ್ಬರೇ ಉಪ ಪ್ರಾಚಾರ್ಯರ ಕೊಠಡಿಯ ಒಳಗಿನ ರೆಸ್ಟ್ ರೂಂನಲ್ಲಿ ಸ್ವಚ್ಛತಾ ಕೆಲಸ ಮಾಡುತ್ತಿದ್ದಾಗ ಇದನ್ನು ಗಮನಿಸಿದ ನೀವು ಉದ್ದೇಶಪೂರ್ವಕವಾಗಿ **"ಏಕಾಏಕೀ ಕೊಠಡಿಯ ಒಳಗೆ ಹೋಗಿ ಶ್ರೀಮತಿ ಸಿ.ಕೆ. ಭಾಗ್ಯಲಕ್ಷ್ಮಿರವರ ಕೈ ಹಿಡಿದು ತಬ್ಬಿಕೊಂಡು ತನ್ನೆಡೆಗೆ ಎಳೆದುಕೊಂಡು ನಂತರ ಅವರ ರವಕೆಯ ಒಳಗೆ ಕೈ ಹಾಕಿ ಎದೆಯನ್ನು ಹಿಡಿದುಕೊಂಡು ಮಾನಭಂಗಕ್ಕೆ ಪ್ರಯತ್ನಿಸಿರುವುದಲ್ಲದೆ"** ಅವರು ನಿಮ್ಮಿಂದ ಪ್ರಯಾಸಪಟ್ಟು ನಿಮ್ಮ ಮುಷ್ಠಿಯಿಂದ ತಪ್ಪಿಸಿಕೊಂಡು ಹೊರಬರಬೇಕಾದರೆ ಹಿಂದಿನಿಂದ ಬಂದ ನೀವು ಶ್ರೀಮತಿ ಭಾಗ್ಯಲಕ್ಷ್ಮಿ ರವರನ್ನು ಉದ್ದೇಶಿಸಿ **"ಈ ಸುದ್ದಿಯನ್ನು ಬಯಲು ಮಾಡಿದರೆ ಕೊಲೆ ಮಾಡುವುದಾಗಿ ಹೆದರಿಸಿರುತ್ತೀರಿ."** ನೀವು ಪೊಲೀಸ್ ಇಲಾಖೆಯಲ್ಲಿ ಒಬ್ಬ ಜವಾಬ್ದಾರಿಯುತ ನೌಕರರಾಗಿದ್ದು ಸಾರ್ವಜನಿಕರಿಗೆ ರಕ್ಷಣೆ ನೀಡಬೇಕಾದ ನೀವೇ ಕಛೇರಿಯ ಮಹಿಳೆಯ ಮೇಲೆ ಮಾನಭಂಗಕ್ಕೆ ಪ್ರಯತ್ನಿಸಿರುವುದಲ್ಲದೆ ಕೊಲೆ ಬೆದರಿಕೆಯನ್ನು ಹಾಕಿ ಗಂಭೀರ ಅಪರಾಧ ಎಸಗಿರುತ್ತೀರಿ. ಇದು ಶಿಸ್ತಿನ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ನಿಮ್ಮ ಅಶಿಸ್ತು ಹಾಗೂ ಅತೀವ ದುರ್ನಡತೆಯನ್ನು ತೋರಿಸುತ್ತದೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿಯನ್ನು ಅದನ್ನೊಪ್ಪದ ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಉಪ ಮಹಾ ನಿರೀಕ್ಷಕರು, (ತರಬೇತಿ) ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 27-5-2009ರ ಆದೇಶದಲ್ಲಿ ಇವರಿಗೆ ಶಿಸ್ತು ಪ್ರಾಧಿಕಾರವು ಈ ಹಿಂದೆ ಮೂರು

ವಾರ್ಷಿಕ ವೇತನ ಬಡ್ತಿಗಳನ್ನು ಮುಂದಿನ ವೇತನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಮುಂದೂಡುವ ಶಿಕ್ಷೆಯನ್ನು ಸೇರಿಸಿ ವಾರ್ಷಿಕ ವೇತನ ಬಡ್ತಿಗಳನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗುವಂತೆ ಐದು ವರ್ಷಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶಿಸ್ತು ಪ್ರಾಧಿಕಾರವು ದಂಡನೆ ವಿಧಿಸಿದ ನಂತರ ಮೇಲ್ಮನವಿ ಪ್ರಾಧಿಕಾರವು ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಶಿಸ್ತು ಪ್ರಾಧಿಕಾರ ವಿಧಿಸಿರುವ ದಂಡನೆಯನ್ನು ಹೆಚ್ಚಿಸಿರುವುದು ಮೇಲ್ಮನವಿ ಪ್ರಾಧಿಕಾರದ ವ್ಯಾಪ್ತಿಯಲ್ಲಿ ಬರುವುದಿಲ್ಲ. ಆದ್ದರಿಂದ ಮೇಲ್ಮನವಿ ಪ್ರಾಧಿಕಾರದ ದಂಡನಾದೇಶವನ್ನು ರದ್ದುಪಡಿಸಿ ಶಿಸ್ತು ಪ್ರಾಧಿಕಾರದ ದಂಡನೆಯನ್ನು ಸ್ಥಿರೀಕರಿಸಲು ಸರ್ಕಾರವು ತೀರ್ಮಾನಿಸಿ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 146 ಪೊಸಿಅ 2009 ಬೆಂಗಳೂರು, ದಿನಾಂಕ : 12–10–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ. ಸಿದ್ದರಾಮಯ್ಯ, ಎ.ಪಿ.ಸಿ., ಸಶಸ್ತ್ರ ಪೊಲೀಸ್ ತರಬೇತಿ ಶಾಲೆ, ಯಲಹಂಕ, ಬೆಂಗಳೂರು, ಇವರಿಗೆ ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಉಪ ಮಹಾ ನಿರೀಕ್ಷಕರು, (ತರಬೇತಿ) ಬೆಂಗಳೂರು, ಇವರ ದಿನಾಂಕ: 27–5–2009ರ ದಂಡನಾದೇಶವನ್ನು ಆದೇಶವನ್ನು ರದ್ದುಪಡಿಸಿ ಶಿಸ್ತು ಪ್ರಾಧಿಕಾರ ಹಾಗೂ ಪ್ರಾಚಾರ್ಯರು, ಸಶಸ್ತ್ರ ಪೊಲೀಸ್ ತರಬೇತಿ ಶಾಲೆ, ಯಲಹಂಕ, ಬೆಂಗಳೂರು, ಇವರು ದಿ: 15–9–2005ರ ಆದೇಶದಲ್ಲಿ ವಿಧಿಸಿದ ದಂಡನೆಯನ್ನು ಸ್ಥಿರೀಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 2634

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎ.ಜಿ. ಕಾರಿಯಪ್ಪ, ಪಿ.ಐ., ರಾಜಾಜಿನಗರ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ: ಡಿಇ(2)/ಸಿಓಪಿ/138/2009 ದಿನಾಂಕ: 22/23–7–2009
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ: ಸಿಬಿ(8)140/2009–10 ದಿನಾಂಕ: 06–02–2010
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 02–4–2010
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)139/2009–10 ದಿನಾಂಕ: 16–6–2010
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 127 ಸಿಎನ್‌ಎಸ್ 10 ದಿನಾಂಕ: 24–9–2010

**ಪ್ರಸ್ತಾವನೆ :**

ಶ್ರೀ ಎ.ಜಿ.ಕಾರಿಯಪ್ಪ, ಪಿ.ಐ., ರಾಜಾಜಿನಗರ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರು ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತನ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7 ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ :**

> "ಶ್ರೀ ಎ.ಜಿ.ಕಾರ್ಯಪ್ಪ, ಪಿ.ಐ. ರಾಜಾಜಿನಗರ ಪೊಲೀಸ್ ಠಾಣೆ, ಬೆಂಗಳೂರು ನಗರ ಆದ ನೀವು ಕ್ರಿಮಿನಲ್ ಅಪೀಲ್ ನಂ.1691/04 ಪ್ರಕರಣದಲ್ಲಿ ಆರೋಪಿಯಾದ ರವಿಕುಮಾರ್ ಬಿನ್ ವೀರಪ್ಪ ರಾಜಾಜಿನಗರ ನಿವಾಸಿ ಬೆಂಗಳೂರು ರವರನ್ನು ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ವಾರೆಂಟ್ ಹೊರಡಿಸಿದ್ದು, ವಾರೆಂಟ್‌ನ್ನು ಕಾರ್ಯಗತಗೊಳಿಸುವಂತೆ ಪಿ.ಸಿ. 8763 ರವರಿಗೆ ನೀವು ಸೂಚಿಸಿದ್ದು, ವಾರೆಂಟ್‌ನ್ನು ಪಡೆದ ಪಿ.ಸಿ. ರವರು ಆರೋಪಿಯನ್ನು ದಸ್ತಗಿರಿ ಮಾಡಿ ಹಾಜರುಪಡಿಸಬೇಕಾಗಿದ್ದು, ಆದರೆ ವಾರೆಂಟ್‌ನ್ನು ನೋಟೀಸೆಂದು ಪರಿಗಣಿಸಿ ಆರೋಪಿಗೆ ಜಾರಿ ಮಾಡಿದ ಸ್ವೀಕೃತಿಯನ್ನು ನೀವು ದೃಢೀಕರಿಸಿ ದಿ: 15–6–2009 ರಂದು ಮಾನ್ಯ ನ್ಯಾಯಾಲಯಕ್ಕೆ ವರದಿ ಸಲ್ಲಿಸಿರುತ್ತೀರಿ. ನೀವು ಒಬ್ಬ ಜವಾಬ್ದಾರಿಯುತ ಠಾಣಾಧಿಕಾರಿಯಾಗಿದ್ದು, ನ್ಯಾಯಾಲಯದಿಂದ ಬಂದ ವಾರಂಟ್‌ನ್ನು ಸೂಕ್ತ ರೀತಿಯಲ್ಲಿ ಜಾರಿ ಮಾಡದೆ ಬೇಜವಾಬ್ದಾರಿಯಿಂದ ವರದಿ ಸಲ್ಲಿಸಿ ನ್ಯಾಯಾಲಯದ ಆಕ್ಷೇಪಕ್ಕೆ ಕಾರಣರಾಗಿ ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತನ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 22/23–7–2009ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಒಂದು ವರ್ಷ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ: 06–02–2010ರ ಆದೇಶದಲ್ಲಿ ವಿಳಂಬ ಕಾರಣದ ಮೇಲೆ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಿ ಅರ್ಜಿದಾರರಿಗೆ ವಿಧಿಸಿರುವ ದಂಡನೆಯು ಆರೋಪಕ್ಕನುಗುಣವಾಗಿಲ್ಲವೆಂದು ಸರ್ಕಾರವು ತೀರ್ಮಾನಿಸಿ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 55 ಪೊಸಿಅ 2010 ಬೆಂಗಳೂರು, ದಿನಾಂಕ : 12–10–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎ.ಜಿ. ಕಾರಿಯಪ್ಪ, ಪಿ.ಐ., ರಾಜಾಜಿನಗರ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರಿಗೆ ಶಿಸ್ತು ಪ್ರಾಧಿಕಾರದ ದಿನಾಂಕ: 22/23–7–2009ರ ಆದೇಶದಲ್ಲಿ ವಿಧಿಸಿರುವ ದಂಡನೆಯನ್ನು ಭಾಗಶಃ ಮಾರ್ಪಡಿಸಿ ವಾಗ್ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ. ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 2635

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಜಿಲ್ಲಾಮಟ್ಟದ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ ಮತ್ತು 20 ಅಂಶಗಳ/15 ಅಂಶಗಳ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಉಸ್ತುವಾರಿ ಸಚಿವರುಗಳನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ** : 1) ಮಾನ್ಯ ಮುಖ್ಯಮಂತ್ರಿಯವರ ಟಿಪ್ಪಣಿ ಸಂಖ್ಯೆ: ಸಿಎಂ/ಗೃಹ/203/2010 ದಿನಾಂಕ: 27–09–2010.
2) ಸರ್ಕಾರಿ ಆದೇಶ ಸಂಖ್ಯೆ: ಯೋಇ 42 ಯೋವಿವಿ 2010 ದಿನಾಂಕ: 18–05–2010.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಟಿಪ್ಪಣಿಯಲ್ಲಿ ಮಾನ್ಯ ಮುಖ್ಯಮಂತ್ರಿಗಳು 30 ಜಿಲ್ಲೆಗಳಿಗೆ ಉಸ್ತುವಾರಿ ಸಚಿವರನ್ನು ನೇಮಕ ಮಾಡಲು ಆದೇಶ ಹೊರಡಿಸುವಂತೆ ಸೂಚಿಸಿದ್ದು, ಅದರಂತೆ ಮೇಲೆ ಓದಲಾದ (2)ರ ಆದೇಶವನ್ನು ರದ್ದುಪಡಿಸಿ ಜಿಲ್ಲಾ ಉಸ್ತುವಾರಿ ಸಚಿವರುಗಳನ್ನಾಗಿ ನೇಮಕ ಮಾಡಲು ಉದ್ದೇಶಿಸಲಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಯೋ ಇ 121 ಯೋವಿವಿ 2010 ಬೆಂಗಳೂರು, ದಿನಾಂಕ: 28ನೇ ಸೆಪ್ಟೆಂಬರ್ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಜಿಲ್ಲಾಮಟ್ಟದ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ ಮತ್ತು 20 ಅಂಶಗಳ/ 15 ಅಂಶಗಳ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಅನುಬಂಧ–1ರಲ್ಲಿನ ಸಚಿವರುಗಳನ್ನು ಜಿಲ್ಲಾ ಉಸ್ತುವಾರಿ ಸಚಿವರುಗಳನ್ನಾಗಿ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ. ಚಿಕ್ಕರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ 1 & 2
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

### ಅನುಬಂಧ

**ಸರ್ಕಾರಿ ಆದೇಶ ಸಂಖ್ಯೆ : ಯೋಇ 121 ಯೋವಿವಿ 2010, ದಿನಾಂಕ: 28–09–2010.**

| ಕ್ರಮ ಸಂಖ್ಯೆ | ಸಚಿವರುಗಳ ಹೆಸರು | ಜಿಲ್ಲೆಗಳ ಹೆಸರು |
|---|---|---|
| 1 | ಶ್ರೀ ಬಿ.ಎಸ್.ಯಡಿಯೂರಪ್ಪ ಮುಖ್ಯಮಂತ್ರಿಗಳು | ಶಿವಮೊಗ್ಗ |
| 2 | ಶ್ರೀ ಗೋವಿಂದ ಕಾರಜೋಳ | ಬಾಗಲಕೋಟೆ |
| 3 | ಡಾ: ವಿ.ಎಸ್.ಆಚಾರ್ಯ | ಉಡುಪಿ |
| 4 | ಶ್ರೀ ಸಿ.ಎಂ.ಉದಾಸಿ | ಹಾವೇರಿ |
| 5 | ಶ್ರೀ ಆರ್.ಅಶೋಕ್ | ಬೆಂಗಳೂರು ನಗರ (ಬೆಂಗಳೂರು ದಕ್ಷಿಣ ಜಿಲ್ಲೆಯ 14 ವಿಧಾನಸಭಾ ಕ್ಷೇತ್ರಗಳು) ಮಂಡ್ಯ |
| 6 | ಶ್ರೀ ಎಸ್.ಎ.ರವೀಂದ್ರನಾಥ್ | ದಾವಣಗೆರೆ |
| 7 | ಶ್ರೀ ಜನಾರ್ದನ ರೆಡ್ಡಿ | ಬಳ್ಳಾರಿ |
| 8 | ಶ್ರೀ ಕಾಗೇರಿ ವಿಶ್ವೇಶ್ವರ ಹೆಗಡೆ | ಉತ್ತರ ಕನ್ನಡ |
| 9 | ಶ್ರೀ ಜಿ.ಕರುಣಾಕರ ರೆಡ್ಡಿ | ಚಿತ್ರದುರ್ಗ |
| 10 | ಶ್ರೀ ಬಿ.ಎನ್.ಬಚ್ಚೇಗೌಡ | ಬೆಂಗಳೂರು ಗ್ರಾಮಾಂತರ |
| 11 | ಶ್ರೀ ಬಸವರಾಜ ಬೊಮ್ಮಾಯಿ | ಗುಲ್ಬರ್ಗಾ |

| | | |
|---|---|---|
| 12 | ಶ್ರೀ ಜಗದೀಶ್ ಶೆಟ್ಟರ್ | ಧಾರವಾಡ |
| 13 | ಶ್ರೀ ಬಿ. ಶ್ರೀರಾಮುಲು | ಗದಗ / ರಾಮನಗರ |
| 14 | ಶ್ರೀ ರೇವುನಾಯಕ ಬೆಳಮಗಿ | ಬೀದರ್ |
| 15 | ಶ್ರೀ ಜೆ.ಕೃಷ್ಣ ಪಾಲೇಮಾರ್ | ದಕ್ಷಿಣ ಕನ್ನಡ |
| 16 | ಶ್ರೀ ವೆಂಕಟರಮಣಪ್ಪ | ಚಿಕ್ಕಬಳ್ಳಾಪುರ |
| 17 | ಶ್ರೀ ಪಿ.ಎಂ.ನರೇಂದ್ರಸ್ವಾಮಿ | ಚಾಮರಾಜನಗರ |
| 18 | ಶ್ರೀ ಡಿ.ಸುಧಾಕರ್ | ರಾಯಚೂರು |
| 19 | ಶ್ರೀ ಮುರುಗೇಶ್ ರುದ್ರಪ್ಪ ನಿರಾಣಿ | ಬಿಜಾಪುರ |
| 20 | ಶ್ರೀ ಉಮೇಶ್ ವಿ.ಕತ್ತಿ | ಬೆಳಗಾವಿ |
| 21 | ಶ್ರೀ ಶಿವರಾಜ್ ತಂಗಡಗಿ | ಕೊಪ್ಪಳ |
| 22 | ಶ್ರೀ ಎಂ.ಪಿ.ರೇಣುಕಾಚಾರ್ಯ | ಚಿಕ್ಕಮಗಳೂರು |
| 23 | ಶ್ರೀ ಕಟ್ಟಾಸುಬ್ರಮಣ್ಯನಾಯ್ಡು | ಬೆಂಗಳೂರು ನಗರ (ಬೆಂಗಳೂರು ಉತ್ತರ ಜಿಲ್ಲೆಯ 14 ವಿಧಾನಸಭಾ ಕ್ಷೇತ್ರಗಳು) |
| 24 | ಶ್ರೀ ಬಾಲಚಂದ್ರ ಜಾರಕಿಹೊಳಿ | ಯಾದಗಿರಿ |
| 25 | ಶ್ರೀಮತಿ ಶೋಭಾ ಕರಂದ್ಲಾಜೆ | ತುಮಕೂರು |
| 26 | ಶ್ರೀ ವಿ.ಸೋಮಣ್ಣ | ಹಾಸನ |
| 27 | ಶ್ರೀ ವಿಜಯಶಂಕರ್ | ಕೊಡಗು |
| 28 | ಶ್ರೀ ನಾರಾಯಣಸ್ವಾಮಿ | ಕೋಲಾರ |
| 29 | ಶ್ರೀ ರಾಮದಾಸ್ | ಮೈಸೂರು |

**ಬಿ. ಚಿಕ್ಕರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ 1 & 2
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

ಪಿ.ಆರ್. 2636

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಮಹಾತ್ಮಾಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ 2009–10ನೇ ಸಾಲಿನ ಬಿಲ್ಲುಗಳ ಪಾವತಿ ಬಗ್ಗೆ.

**ಪ್ರಸ್ತಾವನೆ :**

ಮಹಾತ್ಮಾಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ 2009–10ನೇ ಸಾಲಿನಲ್ಲಿ ನಿರ್ವಹಿಸಲಾದ ಕಾಮಗಾರಿಗಳಿಗೆ ಸಂಬಂಧಪಟ್ಟಂತೆ 2010–11ನೇ ಸಾಲಿನಲ್ಲಿ ಹಣವನ್ನು ಪಾವತಿಸುವ ಕುರಿತು ಸ್ಪಷ್ಟೀಕರಣವನ್ನು ನೀಡುವಂತೆ ಮನವಿಯನ್ನು ಹಾಗೂ ಈ ಬಿಲ್ಲುಗಳ ಪಾವತಿಗಾಗಿ ಅನುದಾನವನ್ನು ಬಿಡುಗಡೆಗೊಳಿಸುವಂತೆ ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯಿತಿಗಳು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸುತ್ತಿವೆ. ಈ ಎಲ್ಲ ಅಂಶಗಳ ಹಿನ್ನಲೆಯಲ್ಲಿ 2009–10ನೇ ಸಾಲಿನಲ್ಲಿ ನಿರ್ವಹಿಸಲಾದ ಕಾಮಗಾರಿಗಳಿಗೆ 2010–11ನೇ ಸಾಲಿನಲ್ಲಿ ಹಣ ಪಾವತಿಸುವ ಕುರಿತು ಸ್ಪಷ್ಟ ನಿರ್ದೇಶನ ನೀಡಬೇಕಾಗಿರುವ ಅವಶ್ಯಕತೆ ಇರುತ್ತದೆ. ಹಾಗೂ 2010–11ನೇ ಸಾಲಿನ ಕಾಮಗಾರಿಗಳಿಗೆ ಹಣ ಪಾವತಿಸುವ ಕುರಿತು ಕೈಗೊಳ್ಳಬೇಕಾಗಿರುವ ಕ್ರಮಗಳನ್ನು ಸ್ಪಷ್ಟಪಡಿಸಬೇಕಾಗಿರುತ್ತದೆ. ಭಾರತ ಸರ್ಕಾರದ ಮಾರ್ಗಸೂಚಿಗಳನ್ನು ಗಮನದಲ್ಲಿಟ್ಟುಕೊಂಡು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಗ್ರಾಅಪ 143 ಮಗ್ರಾಉಖಾಯೊ 2010 ಬೆಂಗಳೂರು, ದಿನಾಂಕ : 05.10.2010**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ಮಹಾತ್ಮಾಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ 2009–10ನೇ ಸಾಲಿನಲ್ಲಿ ನಿರ್ವಹಿಸಲಾದ ಕಾಮಗಾರಿಗಳಿಗೆ ಹಣ ಪಾವತಿಸುವ ಕುರಿತು ಹಾಗೂ 2010–11 ನೇ ಸಾಲಿನ ಕಾಮಗಾರಿಗಳಿಗೆ ಹಣ ಪಾವತಿಸುವ ಸಂಬಂಧ ಈ ಕೆಳಗಿನಂತೆ ಕ್ರಮ ಕೈಗೊಳ್ಳಲು ಆದೇಶಿಸಿದೆ.

1. 2009–10 ನೇ ಸಾಲಿನಲ್ಲಿ ನಿರ್ವಹಿಸಿದ ಕಾಮಗಾರಿಯ ವಿವರಗಳನ್ನು 15–04–2010ರೊಳಗೆ ಎಂ.ಐ.ಎಸ್. ನಲ್ಲಿ ದಾಖಲಿಸದೇ ಇದ್ದರೆ ಅಂತಹ ಕಾಮಗಾರಿಗಳಿಗೆ ಪ್ರಸಕ್ತ ಸಾಲಿನಲ್ಲಿ ಹಣ ಪಾವತಿಸಲು ಅವಕಾಶ ಇರುವುದಿಲ್ಲ.
2. ಈಗಾಗಲೇ ಎಂ.ಐ.ಎಸ್. ನಲ್ಲಿ ದಾಖಲಿಸಿರುವ ಮುಂದುವರೆದ ಕಾಮಗಾರಿಗಳಿಗೆ ಸಂಬಂಧಿಸಿದಂತೆ ವಾಸ್ತವವಾಗಿ ಕೂಲಿಕಾರರು ಕೆಲಸ ನಿರ್ವಹಿಸಿದ ಬಗ್ಗೆ ಎನ್.ಎಂ.ಆರ್. ಗಳನ್ನು ಹಾಗೂ ಇತರೆ ದಾಖಲೆಗಳನ್ನು ಪರಿಶೀಲಿಸಿ, ಸ್ಥಳ ತನಿಖೆ ನಡೆಸಿ ಕಾಮಗಾರಿಗಳು ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು/ ತಾಲ್ಲೂಕು ಪಂಚಾಯತಿ ಕಾರ್ಯನಿರ್ವಾಹಕ ಅಧಿಕಾರಿಗಳು/ ಜಿಲ್ಲಾ ಪರಿಶೀಲನಾ ತಂಡವು ಪೂರ್ಣಗೊಂಡಿರುವುದನ್ನು ದೃಢೀಕರಿಸಿದ ನಂತರವೇ ಹಣ ಪಾವತಿಸುವುದು. ಕೂಲಿಯ ಹಣವನ್ನು ಪಾವತಿಸುವಾಗ Validated Job

Card ಹೊಂದಿರುವವರಿಗೆ ಮಾತ್ರ ಕೂಲಿ ಹಣವನ್ನು ಪಾವತಿಸಲು ಕ್ರಮ ಜರುಗಿಸುವುದು ಹಾಗೂ ಪಾವತಿ ದಿನಾಂಕವನ್ನು ತಪ್ಪದೇ ಎಂ.ಐ.ಎಸ್. ನಲ್ಲಿ ದಾಖಲಿಸುವುದು.

3. 2010–11 ನೇ ಸಾಲಿನಲ್ಲಿ ಎಂ.ಐ.ಎಸ್.ನಲ್ಲಿ ದಾಖಲಿಸದೇ ಯಾವುದೇ ಕಾಮಗಾರಿಗೆ ಹಣ ಪಾವತಿಸತಕ್ಕದ್ದಲ್ಲ. ಒಂದು ವೇಳೆ ಎಂ.ಐ.ಎಸ್. ನಲ್ಲಿ ದಾಖಲಿಸದೇ ಹಣ ಪಾವತಿಸಿದಲ್ಲಿ ಸಂಬಂಧಪಟ್ಟ ಜಿಲ್ಲಾ ಕಾರ್ಯಕ್ರಮ ಅಧಿಕಾರಿ/ ಕಾರ್ಯಕ್ರಮ ಅಧಿಕಾರಿಯನ್ನು ನೇರವಾಗಿ ಹೊಣೆಗಾರರನ್ನಾಗಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್.ಎಸ್. ಪ್ರಸನ್ನಕುಮಾರ್**
ನಿರ್ದೇಶಕರು,
ಮಹಾತ್ಮಾಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ
ಖಾತರಿ ಯೋಜನೆ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿಗಳು
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ

ಪಿ.ಆರ್. 2637

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯದ ವತಿಯಿಂದ ಮೈಸೂರಿನಲ್ಲಿರುವ ವೆಲ್ಲಿಂಗ್‌ಟನ್ ಭವನದ ದುರಸ್ತಿ ಕಾಮಗಾರಿಯಲ್ಲಿ ಸರ್ಕಾರದ ಹಣದ ದುರುಪಯೋಗದ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ಸಂಖ್ಯೆ: ಸಂಕಇ 188 ಕೆಎಂಯು 2001 ದಿನಾಂಕ: 19.01.2001.
2) ಲೋಕಾಯುಕ್ತ ಬೆಂಗಳೂರು ಇವರ ಪತ್ರ ಸಂಖ್ಯೆ:COMPT/LOK/MYS-20/2001-02, ದಿನಾಂಕ: 31.05.2010.
3) ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 182 ಕೆಎಂಯು 2007, ದಿನಾಂಕ: 25.05.2010.

**ಪ್ರಸ್ತಾವನೆ :**

ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯದ ವತಿಯಿಂದ ಮೈಸೂರಿನಲ್ಲಿರುವ ವೆಲ್ಲಿಂಗ್‌ಟನ್ ಭವನದ ದುರಸ್ತಿಗಾಗಿ ಸರ್ಕಾರದ ಹಣ ದುರುಪಯೋಗವಾಗಿದ್ದು ಕಳಪೆ ಕಾಮಗಾರಿಯಾಗಿರುತ್ತದೆ ಎಂದು ಅಂದಿನ ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಗೋ. ಮಧುಸೂಧನ್, ಮೈಸೂರು ಇವರು ಸರ್ಕಾರಕ್ಕೆ ನೀಡಿರುವ ದೂರಿನನ್ವಯ ಈ ಬಗ್ಗೆ ತನಿಖೆ ನಡೆಸಲು ಕರ್ನಾಟಕ ಲೋಕಾಯುಕ್ತ ಕಾಯ್ದೆ 1984 ಅಧಿನಿಯಮ 7(2)(ಎ) ರಡಿಯಲ್ಲಿ ಪ್ರಕರಣವನ್ನು ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ವಿಚಾರಣೆಗಾಗಿ ಲೋಕಾಯುಕ್ತಕ್ಕೆ ವಹಿಸಲಾಗಿದೆ.

ಸರ್ಕಾರದ ಮೇಲಿನ ಆದೇಶದನ್ವಯ ಲೋಕಾಯುಕ್ತರು ಪ್ರಕರಣ ಸಂಖ್ಯೆ COMPT/LOK/MYS-20/2001-02, ರಲ್ಲಿ ವಿಚಾರಣೆ ನಡೆಸಿ ಈ ಪ್ರಕರಣವು, ಸರ್ಕಾರದಿಂದ ಲೋಕಾಯುಕ್ತಕ್ಕೆ ವಹಿಸಲಾದ ಇನ್ನೊಂದು ಪ್ರಕರಣ ಸಂಖ್ಯೆ LOK/ARE-3/ENQ-05/2008-09 ರಲ್ಲಿ ಸೇರಿರುವುದರಿಂದ ಹಾಗೂ ಸದರಿ ಪ್ರಕರಣದ ಬಗ್ಗೆ ಲೋಕಾಯುಕ್ತದಲ್ಲಿ ವಿಚಾರಣೆ ನಡೆಸುತ್ತಿರುವುದರಿಂದ ಈ ಪ್ರಕರಣವನ್ನು ಮುಕ್ತಾಯಗೊಳಿಸುವಂತೆ ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ಲೋಕಾಯುಕ್ತರು ವರದಿ ಮಾಡಿರುತ್ತಾರೆ.

ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯು ರಾಜ್ಯದಲ್ಲಿನ ದೇವಾಲಯಗಳ ಸಂರಕ್ಷಣಾ ಕಾರ್ಯದ ಹೆಸರಿನಲ್ಲಿ ಯಾವುದೇ ಸಂರಕ್ಷಣೆ ಕಾರ್ಯವನ್ನು ಮಾಡದೇ ಕೇವಲ ಬೋಗಸ್ ಬಿಲ್ಲುಗಳನ್ನು ಮಾಡಿ ಸರ್ಕಾರದ ಹಣವನ್ನು ದುರುಪಯೋಗ ಪಡಿಸಿಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿರುವುದರಿಂದ ಈ ಬಗ್ಗೆ ತನಿಖೆ ನಡೆಸಲು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 48 ಎಸ್‌ಎಎಂ 2000 ದಿನಾಂಕ: 09.04.2001 ರಲ್ಲಿ ಲೋಕಾಯುಕ್ತಕ್ಕೆ ವಿಚಾರಣೆಗಾಗಿ ವಹಿಸಲಾಗಿದೆ. ಈ ಪ್ರಕರಣದಲ್ಲಿ ಶ್ರೀ ಎಂ.ವಿ.ಕೃಷ್ಣಪ್ಪ ಇವರ ವಿರುದ್ಧ ಒಟ್ಟು 5 ಆರೋಪಗಳನ್ನು ಮಾಡಲಾಗಿದ್ದು 4ನೇ ಆರೋಪವು ವೆಲ್ಲಿಂಗ್‌ಟನ್ ಭವನದ ದುರಸ್ತಿ ಕಾಮಗಾರಿಯಲ್ಲಿ 37 ತುಂಡು ಗುತ್ತಿಗೆಯನ್ನು ನೀಡಿ ಒಟ್ಟು ರೂ.58,13,183/– ಖರ್ಚಿನಲ್ಲಿ ದುರಸ್ತಿ ಕೈಗೊಂಡು ಹಣ ದುರುಪಯೋಗ ಪಡಿಸಿಕೊಂಡಿರುವುದಕ್ಕೆ ಸಂಬಂಧಿಸಿರುತ್ತದೆ. ಈ ಬಗ್ಗೆ ಲೋಕಾಯುಕ್ತರು ಪ್ರಕರಣ ಸಂಖ್ಯೆ LOK/ARE-3/ENQ-05/2008-09 ರಲ್ಲಿ ವಿಚಾರಣೆ ನಡೆಸಲಾಗಿ 37 ಅಂದಾಜು ಪಟ್ಟಿಗಳಲ್ಲಿ ಒಂದು ಅಂದಾಜು ಪಟ್ಟಿಯು ಉರ್ದು ಶಾಲೆಗೆ ಕಾಂಪೌಂಡ್ ಗೋಡೆ ಹಾಗೂ ವೆಲ್ಲಿಂಗ್‌ಟನ್ ಭವನ, ಮತ್ತು ಸಂಗ್ರಹಾಲಯಕ್ಕೆ ತಂತಿ ಬೇಲಿ ನಿರ್ಮಿಸುವುದಕ್ಕೆ ಸಂಬಂಧಿಸಿದ್ದು ಇದಕ್ಕೆ ರೂ.80,000/–ಗಳನ್ನು ಮಂಜೂರು ಮಾಡಿರುತ್ತಾರೆಂದು, ರೂ.2.00 ಲಕ್ಷಗಳ ವರೆಗೆ ಇಲಾಖಾ ನಿರ್ದೇಶಕರಿಗೆ ಮಂಜೂರಾತಿ ನೀಡಲು ನಿಯಮಾನುಸಾರ ಅವಕಾಶವಿರುವುದರಿಂದ PWD CODE VOL.I ರ ಸೆಕ್ಷನ್ 167ರ ಉಲ್ಲಂಘನೆಯಾಗಿರುವುದಿಲ್ಲವೆಂದು ಅಭಿಪ್ರಾಯಿಸಿ ಸದರಿ ಆರೋಪ ಸಾಬೀತಾಗಿರುವುದಿಲ್ಲವೆಂದು ಲೋಕಾಯುಕ್ತರು ವರದಿ ಮಾಡಿರುವುದರ ಮೇರೆಗೆ ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಎಂ.ವಿ.ಕೃಷ್ಣಪ್ಪ ಹಿಂದಿನ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಇವರನ್ನು ಸದರಿ ಆಪಾದನೆಗಳಿಂದ ದೋಷಮುಕ್ತಗೊಳಿಸಿ ಆದೇಶಿಸಲಾಗಿದೆ.

ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 124 ಕೆಎಂಯು 2010, ಬೆಂಗಳೂರು ದಿನಾಂಕ : 08–10.2010**

ವೆಲ್ಲಿಂಗ್‌ಟನ್ ಭವನ ಮೈಸೂರು ಇದರ ದುರಸ್ತಿ ಕಾರ್ಯದಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರಗಳ ಬಗ್ಗೆ ಲೋಕಾಯುಕ್ತರ ವರದಿ LOK/ARE-3/ENQ-05/2008-09 ರಲ್ಲಿ ಆಪಾದನೆಯು ಸಾಬೀತಾಗಿರುವುದಿಲ್ಲವೆಂದು ತಿಳಿಸಿರುವ ಹಿನ್ನೆಲೆಯಲ್ಲಿ ದಿನಾಂಕ: 22.05.2010ರಂದು ದೋಷಮುಕ್ತಗೊಳಿಸಿ ಆದೇಶ ಹೊರಡಿಸಿರುವುದರಿಂದ COMPT/LOK/MYS-20/2001-02, ರ ಪ್ರಕಾರ ವಹಿಸಿರುವ ವಿಚಾರಣೆಯನ್ನು ಕೈಬಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ಕೆ. ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

ಪಿ.ಆರ್. 2638

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಮಕ್ಕಳ ಕಲ್ಯಾಣ ಸಮಿತಿಗಳಿಗೆ ಅಧ್ಯಕ್ಷರು ಹಾಗೂ ಸದಸ್ಯರನ್ನು ನಾಮನಿರ್ದೇಶನ ಮಾಡುವ ಕುರಿತು.

**ಓದಲಾಗಿದೆ :** 1. ದಿನಾಂಕ: 26.02.2007 ರ ಅಧಿಸೂಚನೆ ಸಂಖ್ಯೆ: ಮಮಇ/3/ಮಭಾಬ/2007
2. ದಿನಾಂಕ: 11.03.2010 ರ ಆದೇಶ ಸಂಖ್ಯೆ: ಮಮಇ/07/ಮಭಾಬ/2010
3. ದಿನಾಂಕ: 06.05.2010 ರ ಆದೇಶ ಸಂಖ್ಯೆ: ಮಮಇ 255 ಮಭಾಬ 2008
4. ದಿನಾಂಕ: 01.10.2010 ರ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶಕರ ಏಕ ಕಡತ ಸಂಖ್ಯೆ: ಮಮಅಇ/ಪಿಡಿಎಂ/59/2010–11 ದಿನಾಂಕ: 1/10/2010

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1) ರ ಅಧಿಸೂಚನೆಯಲ್ಲಿ ಬಾಲನ್ಯಾಯ (ಮಕ್ಕಳ ಪಾಲನೆ ಮತ್ತು ಪೋಷಣೆ) ಅಧಿನಿಯಮ 2000, ತಿದ್ದುಪಡಿ 2006, ಸೆಕ್ಷನ್ 29(1) (2) ಹಾಗೂ ನಿಯಾಮವಳಿ 2007, ನಿಯಮ 7 (2) ರಡಿ 27 ಜಿಲ್ಲೆಗಳಲ್ಲಿನ ಒಟ್ಟು 28 ಮಕ್ಕಳ ಕಲ್ಯಾಣ ಸಮಿತಿಗಳಿಗೆ ಅಧ್ಯಕ್ಷರು ಹಾಗೂ ಸದಸ್ಯರುಗಳನ್ನು ಮೂರು ವರ್ಷಗಳ ಅವಧಿಗೆ ನಾಮನಿರ್ದೇಶನ ಮಾಡಿ ಸಮಿತಿಗಳನ್ನು ರಚಿಸಲಾಗಿದೆ.

ಮೇಲೆ ಓದಲಾದ ಕ್ರಮಾಂಕ (2) ರ ಆದೇಶದಲ್ಲಿ ದಿನಾಂಕ: 26.02.2007ರ ಅಧಿಸೂಚನೆ ಮೂಲಕ ರಚಿಸಲಾದ ಮಕ್ಕಳ ಕಲ್ಯಾಣ ಸಮಿತಿಗಳ ಕಾರ್ಯಾವಧಿ ಪೂರ್ಣಗೊಂಡ ಹಿನ್ನೆಲೆಯಲ್ಲಿ ಹೊಸ ಸಮಿತಿಗಳು ರಚನೆಯಾಗದ ಕಾರಣ ಅಂತಿಮಗೊಂಡ ದಿನಾಂಕದಂದು ಕಾರ್ಯನಿರ್ವಹಿಸುತ್ತಿದ್ದ ಅಧ್ಯಕ್ಷರು ಹಾಗೂ ಸದಸ್ಯರುಗಳನ್ನು ಹೊಸ ಮಕ್ಕಳ ಕಲ್ಯಾಣ ಸಮಿತಿಯನ್ನು ರಚಿಸುವವರೆಗೆ ಅಥವಾ ಮುಂದಿನ ಆದೇಶದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿ ಆದೇಶ ಹೊರಡಿಸಲಾಗಿದೆ.

ಮೇಲೆ ಓದಲಾದ ಕ್ರಮಾಂಕ (3) ರ ಆದೇಶದಲ್ಲಿ ಮಕ್ಕಳ ಕಲ್ಯಾಣ ಸಮಿತಿಗೆ ಅಧ್ಯಕ್ಷರು / ಸದಸ್ಯರುಗಳನ್ನು ಮತ್ತು ಬಾಲನ್ಯಾಯ ಮಂಡಳಿಗಳಿಗೆ ಸಮಾಜ ಕಾರ್ಯಕರ್ತರನ್ನು ಆಯ್ಕೆ ಮಾಡಲು ರಾಜ್ಯ ಮಟ್ಟದ ಆಯ್ಕೆ ಸಮಿತಿಯನ್ನು ರಚಿಸಲಾಗಿದೆ.

ಮೇಲೆ ಓದಲಾದ ಕ್ರಮಾಂಕ (4)ರಲ್ಲಿ ಆಯ್ಕೆ ಸಮಿತಿಯು ಸಂದರ್ಶನ ನಡೆಸಿ 28 ಜಿಲ್ಲೆಗಳ ಒಟ್ಟು 29 ಮಕ್ಕಳ ಕಲ್ಯಾಣ ಸಮಿತಿಗಳಿಗೆ ಅಧ್ಯಕ್ಷರು ಹಾಗೂ ಸದಸ್ಯರುಗಳನ್ನು ಆಯ್ಕೆ ಮಾಡಿದ್ದು, ಆಯ್ಕೆ ಸಮಿತಿಯ ನಡವಳಿಯನ್ನು ಸಲ್ಲಿಸಿರುತ್ತಾರೆ. ಆದ್ದರಿಂದ 28 ಜಿಲ್ಲೆಗಳ ಒಟ್ಟು 29 ಮಕ್ಕಳ ಕಲ್ಯಾಣ ಸಮಿತಿಗಳಿಗೆ ಅಧ್ಯಕ್ಷರು/ಸದಸ್ಯರನ್ನು ನಾಮನಿರ್ದೇಶನ ಮಾಡುವಂತೆ ಹಾಗೂ ಅಭ್ಯರ್ಥಿಗಳ ಕೊರತೆ ಇರುವ ಕಾರಣ ಚಿಕ್ಕಬಳ್ಳಾಪುರ ಜಿಲ್ಲೆಯ ಮಕ್ಕಳ ಕಲ್ಯಾಣ ಸಮಿತಿಯ ವ್ಯಾಪ್ತಿಯನ್ನು ಕೋಲಾರಕ್ಕೂ ಹಾಗೂ ಯಾದಗಿರಿ ಜಿಲ್ಲೆಯ ಮಕ್ಕಳ ಕಲ್ಯಾಣ ಸಮಿತಿಯನ್ನು ಗುಲ್ಬರ್ಗಾಕ್ಕೂ ನಿಗದಿಪಡಿಸಿ ಆದೇಶ ಹೊರಡಿಸುವಂತೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶಕರು ಕೋರಿರುತ್ತಾರೆ.

**ಆದೇಶ ಸಂಖ್ಯೆ : ಮಮಇ 206 ಮಭಾಬ 2010, ಬೆಂಗಳೂರು ದಿನಾಂಕ : 13.10.2010**

ಮೇಲಿನ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಬಾಲನ್ಯಾಯ (ಮಕ್ಕಳ ಪಾಲನೆ ಮತ್ತು ಪೋಷಣೆ) ಅಧಿನಿಯಮ 2000, ತಿದ್ದುಪಡಿ 2006 ರ ಸೆಕ್ಷನ್ 4 ಮತ್ತು 29 ರಡಿಯಲ್ಲಿ ಅನುಬಂಧ–1ರಲ್ಲಿರುವ ಷರತ್ತಿನೊಂದಿಗೆ ಅನುಬಂಧ–2ರಲ್ಲಿರುವ 28 ಜಿಲ್ಲೆಗಳ ಒಟ್ಟು 29 ಮಕ್ಕಳ ಕಲ್ಯಾಣ ಸಮಿತಿಗಳಿಗೆ ಅಧ್ಯಕ್ಷರು ಹಾಗೂ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಿ ಆದೇಶ ಹೊರಡಿಸಿದೆ.

ಚಿಕ್ಕಬಳ್ಳಾಪುರ ಮತ್ತು ಯಾದಗಿರಿ ಜಿಲ್ಲೆಗಳಲ್ಲಿ ಅಭ್ಯರ್ಥಿಗಳು ಲಭ್ಯವಾಗದ ಕಾರಣ ಸದರಿ ಜಿಲ್ಲೆಗಳ ಮಕ್ಕಳ ಕಲ್ಯಾಣ ಸಮಿತಿಗಳನ್ನು ಮುಂದಿನ ಆದೇಶದವರೆಗೆ ಕ್ರಮವಾಗಿ ಕೋಲಾರ ಮತ್ತು ಗುಲ್ಬರ್ಗಾ ಜಿಲ್ಲೆಗಳ ಕಾರ್ಯವ್ಯಾಪ್ತಿಗೆ ಒಳಪಡಿಸಿದೆ.

ಈ ಮಕ್ಕಳ ಕಲ್ಯಾಣ ಸಮಿತಿಗಳು ಬಾಲನ್ಯಾಯ ಕಾಯಿದೆ 2000 ಮತ್ತು ನಿಯಮ 2007 ರನ್ವಯ ಪ್ರದತ್ತವಾದ ಕರ್ತವ್ಯಗಳನ್ನು ನಿರ್ವಹಿಸಲು ಅಧಿಕಾರವನ್ನು ಹೊಂದಿರುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಎನ್. ಕೃಷ್ಣಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ–1
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಅನುಬಂಧ–1

**(ಆದೇಶ ಸಂಖ್ಯೆ : ಮಮಇ 206 ಮಭಾಬ 2010, ಬೆಂಗಳೂರು, ದಿನಾಂಕ : 13.10.2010)**

**ಷರತ್ತುಗಳು :**

1. ಮಕ್ಕಳ ಕಲ್ಯಾಣ ಸಮಿತಿಯ ಕಾರ್ಯವ್ಯಾಪ್ತಿಯು ಆಯಾ ಜಿಲ್ಲೆಗೆ ಮಾತ್ರ ಸೀಮಿತವಾಗಿರುತ್ತದೆ.
2. ರಕ್ಷಣೆ ಮತ್ತು ಪೋಷಣೆಗೆ ಒಳಪಡುವ ಮಕ್ಕಳ ಪ್ರಕರಣಗಳನ್ನು ಮಾತ್ರ ನಿರ್ವಹಿಸತಕ್ಕದ್ದು.
3. ಮಕ್ಕಳ ಕಲ್ಯಾಣ ಸಮಿತಿಯ ಅವಧಿಯು ಆದೇಶ ಹೊರಡಿಸಿದ ದಿನಾಂಕದಿಂದ 3 ವರ್ಷಗಳವರೆಗೆ ಸೀಮಿತವಾಗಿರುತ್ತದೆ.
4. ಪ್ರತಿಯೊಬ್ಬ ಸದಸ್ಯರು ಪ್ರತಿ ಸಿಟ್ಟಿಂಗ್‌ನಲ್ಲಿ ಕನಿಷ್ಠ 4 ಗಂಟೆಗಳು ಕಾರ್ಯನಿರ್ವಹಿಸತಕ್ಕದ್ದು.
5. ವಾರದಲ್ಲಿ ಕನಿಷ್ಠ 1 ದಿನ ಕಾರ್ಯನಿರ್ವಹಿಸಬೇಕು. ಬಾಕಿ ಪ್ರಕರಣಗಳ ಸಂಖ್ಯೆಗಳನ್ನು ಪರಿಶೀಲಿಸಿ ಸಿಟ್ಟಿಂಗ್‌ಗಳನ್ನು ಹೆಚ್ಚಿಸಬಹುದಾಗಿದೆ.
6. ಕೋರಂ ಸಮಿತಿಯ ಅಧ್ಯಕ್ಷರನ್ನು ಒಳಗೊಂಡಂತೆ 3 ಸದಸ್ಯರು ಪ್ರಕರಣಗಳ ಅಂತಿಮ ತೀರ್ಮಾನಗಳನ್ನು ಕೈಗೊಳ್ಳುವಾಗ ಇರಬೇಕಾಗುತ್ತದೆ.
7. ಸಿಟ್ಟಿಂಗ್‌ನ್ನು ಕಡ್ಡಾಯವಾಗಿ ಜಿಲ್ಲೆಯ ಬಾಲಮಂದಿರಗಳಲ್ಲಿ ನಡೆಸಬೇಕಾಗುತ್ತದೆ.
8. ತರಬೇತಿಯು ಕಡ್ಡಾಯ.
9. ಪ್ರತಿ ಸಿಟ್ಟಿಂಗ್‌ಗಾಗಿ ರೂ.500/– ನ್ನು ಸಿಟ್ಟಿಂಗ್ ಫೀ ಆಗಿ ನಿಗದಿಪಡಿಸಲಾಗಿದೆ.
10. ರಾಜ್ಯ ಸರ್ಕಾರವು ನಿಗದಿಪಡಿಸುವ ದರದಲ್ಲಿ ಪ್ರಯಾಣ ಭತ್ಯೆಯನ್ನು ನೀಡಲಾಗುತ್ತದೆ.
11. ಸಮಿತಿಯ ಅವಧಿಯಲ್ಲಿ ಖಾಲಿಯಾಗುವ ಸ್ಥಾನಗಳಿಗೆ ಕಾಯ್ದಿರಿಸಿರುವ ಪಟ್ಟಿಯಿಂದ ಅಥವಾ ಹೊಸದಾಗಿ ಆಯ್ಕೆ ಮಾಡುವ ಮೂಲಕ ಸದಸ್ಯರನ್ನು ಭರ್ತಿ ಮಾಡಲಾಗುವುದು ಹಾಗೂ ಇವರ ಅವಧಿಯು ಸಮಿತಿಯ ಅವಧಿಗೆ ಸೀಮಿತವಾಗಿರುತ್ತದೆ.

12. ಸಮಿತಿಯವರು ರಾಜೀನಾಮೆ ನೀಡಬೇಕಾಗಿದ್ದಲ್ಲಿ ಒಂದು ತಿಂಗಳ ಪೂರ್ವದಲ್ಲೇ ರಾಜೀನಾಮೆ ತಿಳುವಳಿಕೆಯನ್ನು ಆಯ್ಕೆ ಸಮಿತಿಯ ಸದಸ್ಯ ಕಾರ್ಯದರ್ಶಿ ಹಾಗೂ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ / ರಾಜ್ಯ ಸರ್ಕಾರಕ್ಕೆ ಸಲ್ಲಿಸಬೇಕಾಗಿರುತ್ತದೆ.
13. ಸಮಿತಿಯ ಸದಸ್ಯತ್ವವನ್ನು ಈ ಕೆಳಗಿನ ಕಾರಣಗಳಿಂದ ರದ್ದುಗೊಳಿಸಲು ಅವಕಾಶವಿರುತ್ತದೆ.

    ಯಾವ ಸದಸ್ಯರು:–

    - ತಮ್ಮ ಅಧಿಕಾರ ದುರುಪಯೋಗ ಮಾಡಿಕೊಂಡು ದೋಷಿ ಎಂದು ಕಂಡು ಬಂದರೆ
    - ತಮ್ಮ ಬುದ್ಧಿ ಸ್ಥಿಮಿತ ಕಳೆದುಕೊಂಡಲ್ಲಿ
    - ದಿವಾಳಿ ಎಂದು ಘೋಷಿಸಿದಲ್ಲಿ
    - ಅಸ್ಥಿತ್ವದಲ್ಲಿರುವ ಮಕ್ಕಳಿಗೆ ಮತ್ತು ಇತರೆ ಸಂಬಂಧಿತ ಕಾಯ್ದೆಗಳಡಿ ತಪ್ಪಿತಸ್ಥನೆಂದು ಕಂಡುಬಂದಲ್ಲಿ
    - ಸಕ್ರೀಯ ರಾಜಕಾರಣದಲ್ಲಿದ್ದಲ್ಲಿ
    - ರಾಜ್ಯ ಸರ್ಕಾರದ ಗಮನಕ್ಕೆ ಸದರಿ ವ್ಯಕ್ತಿಯು ಸದಸ್ಯರಾಗಿ ಮುಂದುವರೆಯುವುದು ಅನಗತ್ಯವೆಂದು ಕಂಡುಬಂದಲ್ಲಿ ವಿಚಾರಣೆ ನಡೆಸಿ ಸದಸ್ಯತ್ವದಿಂದ ತೆಗೆಯಲು ಅವಕಾಶವಿರುತ್ತದೆ.
    - ನಿರಂತರವಾಗಿ ಯಾವುದೇ ಸಮಂಜಸ ಕಾರಣವಿಲ್ಲದೆ 3 ತಿಂಗಳು ಸಮಿತಿಯ ಕಲಾಪಗಳಿಗೆ ಭಾಗವಹಿಸದಿದ್ದರೆ ಹಾಗೂ 1 ವರ್ಷದ ಒಟ್ಟು ಸಭೆಗಳಲ್ಲಿ ನಾಲ್ಕನೇ ಮೂರಕ್ಕಿಂತ ಕಡಿಮೆ ಸಭೆಗಳಿಗೆ ಹಾಜರಾಗಿದ್ದರೆ.
14. ಉಪ ನಿರ್ದೇಶಕರು 15 ದಿವಸಗಳಿಗೊಮ್ಮೆ ಸಮಿತಿಗೆ ಹಾಜರಾಗುತ್ತಾರೆ ಮತ್ತು ಪ್ರಕರಣಗಳ ಪರಿಶೀಲನೆ ನಡೆಸುವ ಅಧಿಕಾರ ಹೊಂದಿರುತ್ತಾರೆ.
15. ಬಾಲನ್ಯಾಯ ಕಾಯ್ದೆ ಮತ್ತು ನಿಯಮಗಳಡಿ ಕಾರ್ಯನಿರ್ವಹಿಸತಕ್ಕದ್ದು.
16. ಎಲ್ಲಾ ಸಮಯದಲ್ಲೂ ಮಗುವಿನ ಒಳಿತಿನ ಹಿನ್ನೆಲೆಯನ್ನು ಗಮನದಲ್ಲಿಟ್ಟುಕೊಂಡೇ ಪ್ರಕರಣಗಳನ್ನು ನಿರ್ವಹಿಸತಕ್ಕದ್ದು.
17. ಖಾಸಗಿ, ಸರ್ಕಾರಿ ಅಥವಾ ಸ್ವಯಂ ಸೇವಾ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದಲ್ಲಿ ಅವರ ಸಂಸ್ಥೆಯ ಮುಖ್ಯಸ್ಥರುಗಳಿಂದ ಮಕ್ಕಳ ಕಲ್ಯಾಣ ಸಮಿತಿಯಲ್ಲಿ ಕಾರ್ಯನಿರ್ವಹಿಸಲು ಅನುಮತಿ ಪತ್ರವನ್ನು ಪಡೆದು ಸಲ್ಲಿಸತಕ್ಕದ್ದು.

**ಸದಸ್ಯರು ಪಾಲಿಸಬೇಕಾದ ನಡವಳಿಕೆಗಳು :**

1. ಮಕ್ಕಳೊಡನೆ ಸಂಭಾಷಿಸುವಾಗ ಅಥವಾ ಸಮಿತಿಯ ಸಿಟ್ಟಿಂಗ್ ಸಂದರ್ಭಗಳಲ್ಲಿ ಅಥವಾ ಸಂಸ್ಥೆಗಳಿಗೆ ಭೇಟಿ ನೀಡಿದ ಸಂದರ್ಭಗಳಲ್ಲಿ ಅಸಭ್ಯವಾದ ಮಾತುಗಳು / ಸಂಜ್ಞೆಗಳನ್ನು ಬಳಸತಕ್ಕದ್ದಲ್ಲ.
2. ಸಿಟ್ಟಿಂಗ್ ಸಂದರ್ಭದ ಹೊರತುಪಡಿಸಿ ಬೇರೆ ಸಮಯದಲ್ಲಿ ಅಧೀಕ್ಷಕರ ಅನುಮತಿ ಇಲ್ಲದೆ ಸಂಸ್ಥೆಗಳಿಗೆ ಭೇಟಿ ನೀಡತಕ್ಕದ್ದಲ್ಲ.
3. ಮಕ್ಕಳನ್ನು ಅವರುಗಳ ಜಾತಿ, ಧರ್ಮ, ಲಿಂಗ, ವರ್ಣ ಮತ್ತು ಪ್ರಭೇದಗಳನ್ನು ಆಧರಿಸಿ ಭೇದ ತೋರಬಾರದು.
4. ಅಂಗವಿಕಲತೆ ಅಥವಾ ಅಡ್ಡ ಹೆಸರನ್ನು ಗುರುತಿಸಿ ಕರೆಯಬಾರದು.

**ಎಸ್.ಎನ್. ಕೃಷ್ಣಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ-1
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಅನುಬಂಧ-2

**(ಆದೇಶ ಸಂ:ಮಮಇ 206 ಮಭಾಬ 2010, ಬೆಂಗಳೂರು, ದಿನಾಂಕ: 13.10.2010)**

| ಕ್ರ. ಸಂ. | ಜಿಲ್ಲೆಯ ಹೆಸರು | ನಾಮನಿರ್ದೇಶನ ಮಾಡಿದ ಅಧ್ಯಕ್ಷರು ಮತ್ತು ಸದಸ್ಯರುಗಳ ಹೆಸರು ಮತ್ತು ವಿಳಾಸ ಶ್ರೀ/ ಶ್ರೀಮತಿ | | ಪದನಾಮ |
|---|---|---|---|---|
| 1 | ಬೆಂಗಳೂರು (ನಗರ) ಮಕ್ಕಳ ಕಲ್ಯಾಣ ಸಮಿತಿ ಗಂಡು ಮಕ್ಕಳಿಗಾಗಿ:1 | **ರಾಧಾ ಶ್ರೀನಿವಾಸ್ ಮೂರ್ತಿ** | ಸಿ–301, ಕಾಸ ಆನ್ಸಲ್ ಅಪಾರ್ಟ್‌ಮೆಂಟ್ಸ್, ಬನ್ನೇರುಘಟ್ಟ ರೋಡ್, ಬೆಂಗಳೂರು | ಅಧ್ಯಕ್ಷರು |
| | | **ಮಹೇಶಯ್ಯ ಎಂ.ಬಿ.** | # 49, ಎಸ್.ಓ.ಎಸ್ ಬಾಲಗ್ರಾಮ, ಬೆಂಗಳೂರು | ಸದಸ್ಯರು |
| | | **ಪಿ.ಎನ್.ಬಸವರಾಜು,** | # 44, 3ನೇ ಅಡ್ಡರಸ್ತೆ, ಸರಸ್ವತಿ ಪುರಂ, ಅಲಸೂರು, ಬೆಂಗಳೂರು | ಸದಸ್ಯರು |
| | | **ಉಷಾ ವಿ.ಜಿ.** | # 34, ಅಪ್ಪಾ, ನಮ್ಮನೆ, ಅನ್ನಸಂದ್ರ ಪಾಳ್ಯ, ಹೆಚ್.ಎ.ಎಲ್., ಬೆಂಗಳೂರು | ಸದಸ್ಯರು |
| | | **ವಿಜಯಕುಮಾರ್ ಬಿ.** | ಸ್ಟ್ಯಾಡ್, ಪ್ಲಾಟ್ ಸಂ. 1ಬಿ, ಓರಿಯಂಟ್ ಮೇನರ್ 15, ಹೈ ಬೀದಿ, ಐ.ಟಿ.ಸಿ ಇನ್‌ಫೋಟೆನ್ ಪಾರ್ಕ್ ಎದುರು, ಕುಕ್‌ಟೌನ್, ಬೆಂಗಳೂರು | ಸದಸ್ಯರು |
| 1ಅ | ಮಕ್ಕಳ ಕಲ್ಯಾಣ ಸಮಿತಿ | **ಮೀನಾ ಕೆ.ಜೈನ್** | # 1364, 2ನೇ ಮಹಡಿ, 4ನೇ ಅಡ್ಡರಸ್ತೆ, 1ನೇ ಸ್ಟೇಜ್, 2ನೇ ಹಂತ, ಚಂದ್ರಾಲೇಔಟ್, ಬೆಂಗಳೂರು | ಅಧ್ಯಕ್ಷರು |
| | | **ಜೆಸ್ಸಿಂತಾ ಲೋಬೋ,** | ನವಜೀವನ, ನಂ 257, 1ನೇ ಮುಖ್ಯ ರಸ್ತೆ, ಚಾಮರಾಜಪೇಟೆ, ಬೆಂಗಳೂರು | ಸದಸ್ಯರು |

| | | | | |
|---|---|---|---|---|
| | ಹೆಣ್ಣು ಮಕ್ಕಳಿಗಾಗಿ : 2 | **ಅನುಪಮ ದಿನೇಶ್ ಹೆಗಡೆ,** | # 89, ಮೊದಲನೇ ಮಹಡಿ, 12ನೇ ಮುಖ್ಯರಸ್ತೆ, 23ನೇ ಅಡ್ಡ ರಸ್ತೆ, 3ನೇ ಬ್ಲಾಕ್ ಪೂರ್ವ, ಜಯನಗರ, ಬೆಂಗಳೂರು | ಸದಸ್ಯರು |
| | | **ವಿಶಾಲಾಕ್ಷಿ ಟಿ.ಎಸ್.,** | ನಂ.3138, ಗಾಯಿತ್ರಿ ನಗರ, 2ನೇ ಅಡ್ಡರಸ್ತೆ, ಬೆಂಗಳೂರು. | ಸದಸ್ಯರು |
| | | **ಶಿವಮಲ್ಲು,** | ಬಾಸ್ಕೋ ಯುವೋದಯ, ನಂ.91,ಬಿ ಬೀದಿ, 6ನೇ ಅಡ್ಡರಸ್ತೆ, ಗಾಂಧಿನಗರ, ಬೆಂಗಳೂರು | ಸದಸ್ಯರು |
| | | **ಅಲಿಸ್ ಅಲೋಷಿಯಸ್,** | # 80, 2ನೇ ಮೈನ್, ಬಿ.ಡಿ.ಎಸ್ ಗಾರ್ಡನ್, ಗೆದ್ದಲಹಳ್ಳಿ, ಕೊತ್ತನೂರು ಪೋಸ್ಟ್, ಬೆಂಗಳೂರು | ಅಧ್ಯಕ್ಷರು |
| | | **ಜೆ. ನಾಗೇಂದ್ರ** | # 138, ಎಸ್.ಬಿ.ಎಂ. ಕಾಲೋನಿ, 2ನೇ ಅಡ್ಡರಸ್ತೆ, 5ನೇ ಮುಖ್ಯ ರಸ್ತೆ, ಆನಂದನಗರ, ಬೆಂಗಳೂರು | ಸದಸ್ಯರು |
| 2 | ಬೆಂಗಳೂರು ಗ್ರಾಮಾಂತರ | **ಸಿದ್ದರಾಜು ಜೆ.** | ನಂ.551, 2ನೇ ಬಿ ಅಡ್ಡರಸ್ತೆ, 3ನೇ ಹಂತ, 3ನೇ ಘಟ್ಟ, 6ನೇ ಮುಖ್ಯ ರಸ್ತೆ, ಬಸವೇಶ್ವರ ನಗರ, ಬೆಂಗಳೂರು | ಸದಸ್ಯರು |
| | | **ಕೆ.ಎಸ್.ಸಿದ್ದೇಗೌಡ** | ಬಿನ್ ಲೇಟ್:ಶಂಭಯ್ಯ, ಶ್ಯಾಸಾಪುರ ಗ್ರಾಮ ಮತ್ತು ಅಂಚೆ, ಕುಡಗಲ್ ಹೋಬಳಿ, ರಾಮನಗರ(ತಾ), ರಾಮನಗರ ಜಿಲ್ಲೆ | ಸದಸ್ಯರು |
| | | **ರಾಮಚಂದ್ರಪ್ಪ ಹೆಚ್.ಟಿ.** | ಶ್ರೀ ವೆಂಕಟೇಶ್ವರ ನಿಲಯ, ನಂ.1, 8ನೇ ಅಡ್ಡರಸ್ತೆ, ವಿ.ವಿ.ಎಕ್ಸ್‌ಟೆನ್ಷನ್, ಕಾಲೇಜು ರಸ್ತೆ, ಹೊಸಕೋಟೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ | ಸದಸ್ಯರು |
| | | **ಡಾ.ಎಸ್.ವಿ.ಪಂಚಮುಖಿ** | ಸೆಕ್ಟರ್ ನಂ–54, ಫ್ಲಾಟ್ ನಂ.76 ಇ, ನವನಗರ, ಬಾಗಲಕೋಟೆ | ಅಧ್ಯಕ್ಷರು |
| | | **ರೂಪ ನೀಲಕಂಠ ಘಂಟಿ,** | ವಕೀಲರು, ಘಂಟಿ ಬಿಲ್ಡಿಂಗ್, ಎಕ್ಸ್‌ಟೆನ್‌ಷನ್ ಏರಿಯಾ, ಬಾಗಲಕೋಟೆ | ಸದಸ್ಯರು |
| 3 | ಬಾಗಲಕೋಟೆ | **ಮಂಜುಳಾ ಯೋಗೇಂದ್ರ ಜೋಶಿ** | ಸ್ವಯಂ ಸೇವಾ ಅಭಿವೃದ್ಧಿ ಸಂಸ್ಥೆ(ರಿ), ಕಮತಗಿ, ಬಸರಿಕಟ್ಟೆ ರೋಡ್, ಬಾಗಲಕೋಟೆ | ಸದಸ್ಯರು |
| | | **ಶಾರದಾ ಅಂದಾನೆಪ್ಪ ಬದಾಮಿ** | ವಕೀಲರು, ಕೌಟುಂಬಿಕ ಸಲಹೆಗಾರರು, ದಾನೇಶ್ವರಿ ನಿಲಯ, 8ನೇ ರೋಡ್, ವಿದ್ಯಾಗಿರಿ, ಬಾಗಲಕೋಟೆ | ಸದಸ್ಯರು |
| | | **ಅಂತೋನಿಯಪ್ಪ** | ಎಂ.ಡಿ.ಜಿ–2, ನಂ.28, ಹೌಸಿಂಗ್ ಕಾಲೋನಿ ಮಂಜೂರು ರೋಡ್, ಮುಧೋಳ್, ಬಾಗಲಕೋಟೆ ಜಿಲ್ಲೆ | ಸದಸ್ಯರು |
| | | **ಮರಿಯಾ ಜಾಯ್‌ಲಿನ್,** | "ಕಾರ್ಮೆಲ್ ನಿವಾಸ" ದೇವಲಾಪುರ ರೋಡ್, ಬೈಲಹೊಂಗಲ, ಬೆಳಗಾಂ | ಅಧ್ಯಕ್ಷರು |
| | | **ನಂದಕಿಶೋರ್ ಗೌಡರ** | ಬಡಿಗೇರ ಬೀದಿ, ಹುಕ್ಕೇರಿ, ಬೆಳಗಾಂ ಜಿಲ್ಲೆ | ಸದಸ್ಯರು |
| | | **ನಂದ ಎಂ.ನಾಯಕರ್** | # 362, ಗಾಂಧೀಗಲ್ಲಿ, ಬಸವಣ ಕುಡಚಿ, ಬೆಳಗಾವಿ | ಸದಸ್ಯರು |
| 4 | ಬೆಳಗಾಂ | **ಶೈಲಜಾ ಬಿ. ಕುರುಬೇಟ್** | ಯುನೈಟೆಡ್ ಸಮಾಜ ಕಲ್ಯಾಣ ಸಂಸ್ಥೆ, ಶ್ರೀ ಶಾರದಾ ಮಾತಾ ಸ್ವಾಧಾರ ಕೇಂದ್ರ, ಗೋವರ್ಧನ ಬಿಲ್ಡಿಂಗ್ ಎ.ಪಿ.ಎಂ.ಸಿ. ರೋಡ್, ಸಂಗಮೇಶ್ವರ ನಗರ, ಬೆಳಗಾಂ | ಸದಸ್ಯರು |
| | | **ಸುನಂದ ಶಿ.ಕಾಮೊಳ್ಳಿಮಠ** | ಕೇರಾಫ್. ಯು.ಹೆಚ್. ಹಿರೇಮಠ್, ಟಾಡ್‌ಕರ್ಸ್ ಬಿಲ್ಡಿಂಗ್, ವಿನಾಯಕ ನಗರ, ಹಿಂಡಲ್ಗ ರೋಡ್, ಬೆಳಗಾಂ | ಸದಸ್ಯರು |
| | | **ಪೀರ್ ಮೊಹಮದ್, ಬಿ** | ವಕೀಲರು, ಎಂ.ಆರ್.ಮಂಜಿಲ್, 6ನೇ ಕ್ರಾಸ್, ಹುಸ್ಸೇನ್‌ನಗರ, ಬಳ್ಳಾರಿ | ಅಧ್ಯಕ್ಷರು |
| | | **ಎಂ. ಪ್ರೇಮಲತಾ** | # 120/17, ಸಾರಂಗಂ ಕಾಂಪೌಂಡ್, 3ನೇ ಕ್ರಾಸ್, ಸತ್ಯನಾರಾಯಣ ಪೇಟೆ, ಬಳ್ಳಾರಿ | ಸದಸ್ಯರು |
| 5 | ಬಳ್ಳಾರಿ | **ಹೆಚ್.ವೀರಶೇಖರ** | ವಕೀಲರು, ಚಾಗನೂರು ಗ್ರಾಮ, ಹಗರಿ ಪೋಸ್ಟ್, ಬಳ್ಳಾರಿ ಜಿಲ್ಲೆ | ಸದಸ್ಯರು |

| | | | | |
|---|---|---|---|---|
| | | **ಆರ್.ಯಶೋದ** | ಕೋಂ ರಾಜಗೋಪಾಲ್, 18/60, 3ನೇ ಕ್ರಾಸ್, ಪಾರ್ವತಿನಗರ, ಬಳ್ಳಾರಿ | ಸದಸ್ಯರು |
| | | **ಜಿ.ಪದ್ಮಿನಿ ಜಿ.ವಿ.ಆರ್ ಮೂರ್ತಿ** | ಪ್ಲಾಟ್ ನಂ.405, ಕಪಗಲ್ ರೋಡ್, ಬಳ್ಳಾರಿ | ಸದಸ್ಯರು |
| 6 | ಬೀದರ್ | **ಮಾಣಿಕ ರಾವ್ ಬಾಲ್ಕಿ** | ಸಿದ್ದಾರ್ಥ ಕಲಾ ಮತ್ತು ವಾಣಿಜ್ಯ ಪದವಿ ಮಹಾ ವಿದ್ಯಾಲಯ, ಜನವಾಡ ರಸ್ತೆ, ಬೀದರ್ | ಅಧ್ಯಕ್ಷರು |
| | | **ಬಜರಂಗ ಲೋಹಾರ್** | ಕೆ/ಆ ರಮೇಶ ಹುಡಗಿ, ವಕೀಲರು, ಇಂದಿರಾ ಮಾರ್ಕೆಟ್ ಕಾಂಪ್ಲೆಕ್ಸ್, ಹಳೆ ಬಸ್‌ಸ್ಟ್ಯಾಂಡ್ ಹತ್ತಿರ, ಬೀದರ್ | ಸದಸ್ಯರು |
| | | **ರಮೇಶ್ ಅಂಬುಲಕರ್** | 16–1–292, ಕೈಲಾಸನಗರ, ಮನ್ನಳ್ಳಿ ರಸ್ತೆ, ಬೀದರ್ | ಸದಸ್ಯರು |
| | | **ವೈಜಿನಾಥ್ ಹಿರೇಮಠ** | # 9–12–365/ಎ, ಮೈಲೂರ ರಸ್ತೆ, ವಿದ್ಯಾನಗರ ಕಾಲೋನಿ, ಬೀದರ್ | ಸದಸ್ಯರು |
| | | **ಶ್ರೀನಿವಾಸ ಕರಾಟೆ** | ಜನವಾಡ ತಾ, ಬೀದರ್ | ಸದಸ್ಯರು |
| 7 | ಬಿಜಾಪುರ | **ವಾಸುದೇವ ಎಸ್. ತೋಳಬಂದಿ** | ನೀಲಾಂಬಿಕ ನಿವಾಸ, ಶಾಂತಿನಗರ, ಬಿಜಾಪುರ | ಅಧ್ಯಕ್ಷರು |
| | | **ಜೆರಾಲ್ಡ್ ಡಿಸೋಜಾ** | ಸಿ.ಎನ್.ಎಫ್.ಇ,54, ಮುಕುಂದನಗರ, ಸ್ಟೇಷನ್ ರೋಡ್, ಬಿಜಾಪುರ | ಸದಸ್ಯರು |
| | | **ವನಿತಾ ಎಸ್. ತೊರವಿ** | ಗ್ಯಾನಿ ಪ್ಲಾಟ್, ಗಣೇಶ್ ಗುಡಿ ಹತ್ತಿರ ಸ್ಟೇಷನ್ ರಸ್ತೆ, ಬಿಜಾಪುರ | ಸದಸ್ಯರು |
| | | **ಲಲಿತಾ ಪಿ.ಶೆಟ್ಟರ್** | ಕಾಸಗೇರಿಗಲ್ಲಿ, ಭಾಗಿರಥಿ ನಿವಾಸ, ಬಿಜಾಪುರ | ಸದಸ್ಯರು |
| | | **ಶ್ರೀಧರ್ ಗೋವಿಂದರಾವ್ ಕುಲಕರ್ಣಿ** | ಚಿದಂಬರ ನಗರ, ಇಬ್ರಾಹಿಂಪೂರ ಹತ್ತಿರ, ಬಾಗೇವಾಡಿರಸ್ತೆ, ಎನ್.ಹೆಚ್–13, ರಿಂಗ್ ರಸ್ತೆ ಹತ್ತಿರ, ಬಿಜಾಪುರ | ಸದಸ್ಯರು |
| 8 | ಚಾಮರಾಜನಗರ | **ಬಿ.ಲೋಚನ** | ಶಂಕರಪುರ 2ನೇ ಕ್ರಾಸ್, ಚಾಮರಾಜನಗರ | ಅಧ್ಯಕ್ಷರು |
| | | **ಚಂದ್ರನಾಯಕ್ ಕೆ.ಹೆಚ್.** | ಸಿಂಗನಪುರ, ಕಣ್ಣೇಗಾಲ ಅಂಚೆ, ಚಾಮರಾಜನಗರ ತಾಲ್ಲೂಕು | ಸದಸ್ಯರು |
| | | **ಮಮತ ಬಿ.** | ಕೋಂ ವಿಶ್ವನಾಥ್, ಎಸ್.ಆರ್.ಎಸ್ ಕಟ್ಟಡ, ದೇವಾಂಗ 3ನೇ ಬೀದಿ, ಚಾಮರಾಜನಗರ | ಸದಸ್ಯರು |
| | | **ಹೆಚ್.ಹೇಮಾವತಮ್ಮ** | # 214, ಎಲ್.ಐ.ಸಿ. ಕಾಲೋನಿ, ಶ್ರೀರಾಮಪುರ, 2ನೇ ಅಡ್ಡರಸ್ತೆ, ಮೈಸೂರು, ಚಾಮರಾಜನಗರ ಜಿಲ್ಲೆ. | ಸದಸ್ಯರು |
| | | **ನಟರಾಜು ಎಂ.** | ಮಲ್ಲಯ್ಯನಪುರ, ಉತ್ತುವಳ್ಳಿ ಅಂಚೆ, ಚಾಮರಾಜನಗರ | ಸದಸ್ಯರು |
| 9 | ಚಿಕ್ಕಮಗಳೂರು | **ಮಮತ. ಡಿ.ಎಸ್** | ಕಾಳಿದಾಸನಗರ, ವಸವನಹಳ್ಳಿ, ಚಿಕ್ಕಮಗಳೂರು | ಅಧ್ಯಕ್ಷರು |
| | | **ಜಗದೀಶ್ ಬಿ.ಆರ್** | ಬಿಳೇಕಲ್ಲು, ಜ್ಯೋತನಗರ ಅಂಚೆ, ಚಿಕ್ಕಮಗಳೂರು | ಸದಸ್ಯರು |
| | | **ಕೆ.ಬಿ.ಸೋಮೇಶ್** | ಸೋಮೇಶ್ವರ ನಿಲಯ, ಟಿ.ಬಿ.ರಸ್ತೆ, ಕಡೂರು, ಚಿಕ್ಕಮಗಳೂರು | ಸದಸ್ಯರು |
| | | **ನಟರಾಜ್ ಹೆಚ್.ಸಿ** | ನ್ಯಾಯವಾದಿಗಳು, ರಂಗಣ್ಣನ ಛತ್ರದ ಎದುರು, ಬಸವನಹಳ್ಳಿ, ಚಿಕ್ಕಮಗಳೂರು | ಸದಸ್ಯರು |
| | | **ಸುರೇಶ್‌ಚಂದ್ರ. ಎಸ್** | ಸಂಕಣ್ಣನ ಬೀದಿ, ತರೀಕೆರೆ, ಚಿಕ್ಕಮಗಳೂರು ಜಿಲ್ಲೆ | ಸದಸ್ಯರು |
| 10 | ಚಿತ್ರದುರ್ಗ | **ಡಿ.ಕೆ ಶೀಲಾ** | # 14, 1ನೇ ಮುಖ್ಯ ರಸ್ತೆ, ಸರಸ್ವತೀಪುರಂ ರಸ್ತೆ ಬೈಪಾಸ್ ಸರ್ಕಲ್, ಚಿತ್ರದುರ್ಗ | ಅಧ್ಯಕ್ಷರು |
| | | **ಸುಮನ ಎಸ್. ಅಂಗಡಿ** | ರೀಡರ್ ಇನ್‌ಲಾ, ನಂ.1000, ದೊಡ್ಡಪೇಟೆ, ರಂಗಯ್ಯನಬಾಗಿಲು ಹತ್ತಿರ, ಚಿತ್ರದುರ್ಗ | ಸದಸ್ಯರು |

| | | | | |
|---|---|---|---|---|
| | | **ಎಸ್.ಬಿ. ಶಿವಕುಮಾರ್** | ಉಪನ್ಯಾಸಕರು, ಬಸವಶ್ರೀ,<br># 45, ಜೋಗಿಮಟ್ಟಿ ರಸ್ತೆ, 6ನೇ ಕ್ರಾಸ್,<br>ಚಿತ್ರದುರ್ಗ | ಸದಸ್ಯರು |
| | | **ಎಸ್. ಶೇಷಾದ್ರಿ** | ವಕೀಲರು, ಪ್ರಧಾನರಸ್ತೆ, ಹಿರಿಯೂರು<br>ಚಿತ್ರದುರ್ಗ ಜಿಲ್ಲೆ | ಸದಸ್ಯರು |
| | | **ಮಧುಕರ್.ಎಸ್.** | ವಕೀಲರು, "ದ್ಯಾಮಲಂಬ ನಿಲಯ",<br>ಜೋಗಿಮಟ್ಟಿ ರಸ್ತೆ, 5ನೇ ಕ್ರಾಸ್,<br>ಪಟ್ಟದ ಪರಮೇಶ್ವರಿ ಸ್ಕೂಲ್ ಹಿಂಭಾಗ,<br>ಚಿತ್ರದುರ್ಗ | ಸದಸ್ಯರು |
| 11 | ಧಾರವಾಡ | **ಡಾ: ಶಂಕರ್ ಆರ್ ಲಮಾಣಿ** | ಕೇರ್ ಆಫ್ ಎಸ್.ಬಿ.ಶಿಂಧೆ, # 27, 2ನೇ ಕ್ರಾಸ್,<br>ಜಯನಗರ, ಧಾರವಾಡ | ಅಧ್ಯಕ್ಷರು |
| | | **ಸಿ. ರೆಜಿನಾ ಐರಿನ್ ಡಿಸಿಲ್ವಾ** | ಶಾಂತಿ ಪ್ರಗತಿ ಕೇಂದ್ರ, ನಿರ್ಮಲ ನಗರ, ಧಾರವಾಡ | ಸದಸ್ಯರು |
| | | **ಮಂಜುನಾಥ ನಾಗಪ್ಪ ಸಣ್ಣಿಂಗಣ್ಣನವರ್** | ನಂ. 42/87, ನೆಹರುನಗರ, ಗೋಕುಲ ರೋಡ್,<br>ಹುಬ್ಬಳ್ಳಿ | ಸದಸ್ಯರು |
| | | **ರುದ್ರಗೌಡ ಯಲ್ಲಪ್ಪಗೌಡ ಶಿರೂರ** | ಹೊಸ ಓಣಿ, ಗುಲಗಂಜಿಕೊಪ್ಪ,<br>ಧಾರವಾಡ | ಸದಸ್ಯರು |
| | | **ಡಾ: ಪೂರ್ಣಿಮ ಅಶೋಕ ಗೌರೋಜಿ,** | ಕೇರ್ ಆಫ್ ಗೌರೋಜಿ ಕ್ಲಿನಿಕ್, ಸಿ/1182,<br>ರಾಮನಗರ, 1ನೇ ಮೇನ್, ಎನ್.ಟಿ.ಟಿ.ಎಫ್ ಹತ್ತಿರ,<br>ಧಾರವಾಡ | ಸದಸ್ಯರು |
| 12 | ದಾವಣಗೆರೆ | **ಕುರಿಯಾ ಕೊಸ್ ಎನ್.ಯು.** | ಡಾನ್ ಬಾಸ್ಕೋ ಬಾಲಕಾರ್ಮಿಕರ ಮಿಷನ್,<br>ಮೊದಲನೇ ಮುಖ್ಯ ರಸ್ತೆ, ವಿಜಯನಗರ<br>ಬಡಾವಣೆ, ಕೊಂಡಜ್ಜಿ ರಸ್ತೆ, ದಾವಣಗೆರೆ | ಅಧ್ಯಕ್ಷರು |
| | | **ಡಾ: ಎ. ನಾಗರಾಜಚಾರಿ** | # 3682/ಎ–58, "ಗಾಯಿತ್ರಿ ಕೃಪ", 7ನೇ ಕ್ರಾಸ್,<br>1ನೇ ಮೈನ್, ತರಳುಬಾಳುನಗರ, ದಾವಣಗೆರೆ | ಸದಸ್ಯರು |
| | | **ವಸಂತ ಕುಮಾರಿ ಐ** | ಶ್ರೀ ಜಯದೇವ ಕಾಂಪ್ಲೆಕ್ಸ್, ಬೆಳುಂದಿ ಸ್ಟ್ರೀಟ್,<br>ದಾವಣಗೆರೆ | ಸದಸ್ಯರು |
| | | **ಕೆ.ಎನ್.ಶಿವಕುಮಾರ್** | # 692/4, ಕೊಟ್ರೇಶ್ ನಿವಾಸ, ಎಸ್.ಬಿ.ಎಂ,<br>1ನೇ ಕ್ರಾಸ್, ನಿಟ್ಟುವಳ್ಳಿ ನ್ಯೂ ಎಕ್ಸ್‌ಟೆನ್‌ಷನ್,<br>ಲೆನಿನ್ ನಗರ 2ನೇ ಸ್ಟೇಜ್, ದಾವಣಗೆರೆ | ಸದಸ್ಯರು |
| | | **ಎಸ್.ಎಂ.ಶಿವಾನಂದ ಸ್ವಾಮಿ** | # 1966/98, :ಶಿವಗಂಗಾ", "ಎ" ಬ್ಲಾಕ್<br>ಎಸ್.ಎಸ್. ಲೇ ಔಟ್, ದಾವಣಗೆರೆ | ಸದಸ್ಯರು |
| 13 | ಗದಗ | **ಪೀರವ್ವ ವಿ. ಗೋಣೆಣ್ಣನವರ್** | ಕೇರ್ ಆಫ್ ಒಡೆಯರ್ ಬಿಲ್ಡಿಂಗ್, ವಿವೇಕಾನಂದ<br>ನಗರ, ಗದಗ್ ಜಿಲ್ಲೆ | ಅಧ್ಯಕ್ಷರು |
| | | **ಸುದೀರ ಸಿಂಹ ಆರ್ ಘೋರ್ಪಡೆ** | ಸಿ.ಡಿ.ಓ ಜೈನ್ ಶಾಲೆ ಹತ್ತಿರ,<br>ರಾಜೋಟೇಶ್ವರ ನಗರ, ಗದಗ್ | ಸದಸ್ಯರು |
| | | **ಸುಮಿತ್ರ ಬಸಪ್ಪ ಶ್ರೀಗಿರಿ** | "ಸಂಗಮೇಶ್ವರ ಕೃಪಾ" ಜೆ.ಟಿ.ಕಾಲೇಜ ರೋಡ್,<br>ಗದಗ್ | ಸದಸ್ಯರು |
| | | **ಗುರುಲಿಂಗಯ್ಯ ಚನ್ನಬಸಯ್ಯ ರೇಶ್ಮಿ** | ರಾಜಾಜಿ ಮುಖ್ಯ ರಸ್ತೆ, 2ನೇ ಅಡ್ಡರಸ್ತೆ,<br>ಬೆಟಗೇರಿ, ಗದಗ | ಸದಸ್ಯರು |
| | | **ಸುಮಿತ್ರಾ ಸಿದ್ದಪ್ಪ ಬಾವಿಕಟ್ಟೆ** | ಕೇರಾಫ್–ಎಂ. ಜೋಗಿನ, ಒಕ್ಕಲಗೇರಿ,<br>ಕುಂಬಾರ ಓಣಿ, ಗದಗ್ | ಸದಸ್ಯರು |
| 14 | ಗುಲ್ಬರ್ಗಾ | **ಆನಂದ್** | ಮಾರ್ಗದರ್ಶಿ ಸಂಸ್ಥೆ, ಕೆ.ಪಿ.ಟಿ.ಸಿ.ಎಲ್<br>(ಕೆ.ಇ.ಬಿ)ವಸತಿ ಗೃಹ, ತಾರಾ ಫ್ಲೈಲ್, ಗುಲ್ಬರ್ಗಾ | ಅಧ್ಯಕ್ಷರು |
| | | **ಐರಿನ್ ಥೆರೆಜ್ ಲೋಬೊ** | ದೀಪಾಲಯ, ಡಿ–104 ನಿವ್‌ಷನ್ ಗ್ರಿಂಲಾ<br>ಅಪಾರ್ಟ್‌ಮೆಂಟ್, ಸಂತೋಷ ಕಾಲೋನಿ,<br>ಗುಲ್ಬರ್ಗಾ | ಸದಸ್ಯರು |
| | | **ಪ್ರೊ.ಲಿಂಗರಾಜ ಎಂ ಕೋಣೆನ್‌ಕರ್** | # 3–335, ಗಾಜೀಪುರ (ಚಕ್ರಕಟ್ಟ),<br>ಗುಲ್ಬರ್ಗಾ | ಸದಸ್ಯರು |
| | | **ಸೂರ್ಯಕಾಂತ. ಎಮ್.ಹೆಚ್** | # ಇ–1–418313, 14ನೇ ಕ್ರಾಸ್, ಕೆ.ಇ.ಬಿ ರಸ್ತೆ, | ಸದಸ್ಯರು |

| | | | | |
|---|---|---|---|---|
| | | | ತಾರಾ ಫ್ಲೈಲ್, ಗುಲ್ಬರ್ಗಾ ಜಿಲ್ಲೆ | |
| | | **ಮಲ್ಲಿಕಾರ್ಜುನ ವೀರಣ್ಣ ದುತ್ತರಗಾಂವ್** | # 134/17, ಜಾಧವ ಲೇಔಟ್, ಬಿದ್ದಾಪುರ ಕಾಲೋನಿ, ಗುಲ್ಬರ್ಗಾ | ಸದಸ್ಯರು |
| 15 | ಹಾಸನ | **ಎಂ.ಎಸ್.ಮಧುರ** | ಕೋಂ ಗಿರಿಗೌಡ ಕೇರ್‌ಆಫ್ ಗ್ಯಾಸ್ ಸತೀಶ್, ವಿಜಯನಗರ ಬಡಾವಣೆ, ರೇಷ್ಮೆ ಇಲಾಖೆ ಹತ್ತಿರ, ಸಕಲೇಶಪುರ ರಸ್ತೆ, ಹಾಸನ | ಅಧ್ಯಕ್ಷರು |
| | | **ಅನಿಲ್ ಕ್ರಿಸ್ಟೋಫರ್,** | ಇ.ಡಬ್ಲ್ಯೂ.ಎಸ್–779 ಕೆ.ಹೆಚ್.ಬಿ.ಕುವೆಂಪುನಗರ, ಹಾಸನ | ಸದಸ್ಯರು |
| | | **ಜಿ.ಡಿ.ರಮಾಕಾಂತ,** | ಪ್ರೇಮ ನಿಲಯ, ದೇವರಾಜ ಅರಸ್ ರಸ್ತೆ, ವಿದ್ಯಾನಗರ, ಹಾಸನ | ಸದಸ್ಯರು |
| | | **ದೇವರಾಜು** | ಎನ್‌ಸಿಸಿ ಆಫೀಸ್ ಹತ್ತಿರ, ಹೇಮಂತ್ ಡ್ರೆಸ್ ಮೇಕರ್ಸ್ ಪಕ್ಕ, ಕಾಲೇಜು ರಸ್ತೆ, ಹಾಸನ | ಸದಸ್ಯರು |
| | | **ಡಾ: ಎ. ವಾಣಿ ನಾಗೇಶ** | "ನವ", ಕಿವಿ ಮೂಗು, ಗಂಟಲು ಮತ್ತು ದಂತ ಚಿಕಿತ್ಸಾ ಕೇಂದ್ರ, ಆರ್.ಸಿ.ರಸ್ತೆ, ಹಾಸನ | ಸದಸ್ಯರು |
| 16 | ಹಾವೇರಿ | **ಡಾ: ರಾಜಕುಮಾರ ಎನ್. ಮರೋಳ** | ಶಿವಜ್ಯೋತಿ ಮಕ್ಕಳ ಆರೋಗ್ಯ ಸಂಸ್ಥೆ, ಹೆಗ್ಗೇರಿ ರೋಡ್, ಹಾವೇರಿ | ಅಧ್ಯಕ್ಷರು |
| | | **ಗೀತಾ ವಿ.ಪೂಜಾರ** | ಮಲಗುಂದ, ಕಲ್ಲಾಪುರ, ಪೋ ಹಾನಗಲ್, ಹಾವೇರಿ | ಸದಸ್ಯರು |
| | | **ಕರಿಬಸಪ್ಪ ಲಕ್ಷ್ಮಪ್ಪ ಅಂಗರಗಟ್ಟಿ** | ವಿದ್ಯಾನಗರ, 3ನೇ ರಸ್ತೆ, ಮುನ್ಸಿಪಲ್ ಹೈಸ್ಕೂಲ್ ರಸ್ತೆ, ಹಾವೇರಿ | ಸದಸ್ಯರು |
| | | **ಮೈತ್ರಾ ಶಿವಪ್ಪ ಹದಡಿ** | ಗಾಂಜಿಗಲ್ಲಿ ಕೋಟೆ, ರಾಣಿಬೆನ್ನೂರು ತಾಲ್ಲೂಕು, ಹಾವೇರಿ | ಸದಸ್ಯರು |
| | | **ಅರವಿಂದ ವೀರಭದ್ರಪ್ಪ ಕಾಳಪ್ಪನವರ್** | ಬಿ" ಬ್ಲಾಕ್, 3ನೇ ಮುಖ್ಯ ರಸ್ತೆ, ವಿದ್ಯಾನಗರ, ಹಾವೇರಿ | ಸದಸ್ಯರು |
| 17 | ಕೊಡಗು | **ಡಾ: ಎಸ್.ಎಂ. ಕಾವೇರಪ್ಪ** | ಹಳೆ ತಾಲ್ಲೂಕು, ನಾಪೋಕ್ಲು ಅಂಚೆ, ಕೊಡಗು ಜಿಲ್ಲೆ | ಅಧ್ಯಕ್ಷರು |
| | | **ಬಿ.ಸಿದ್ಧರಾಜು ಬೆಳ್ಳಪ್ಪ** | ಮದೆಮಹೇಶ್ವರ ಪದವಿ ಪೂರ್ವ ಕಾಲೇಜು, ಮದೆ ಮಡಕೇರಿ, ಕೊಡಗು | ಸದಸ್ಯರು |
| | | **ಬಿ.ಎಸ್.ಸತೀಶ್** | ನಾಕೂರು ಗ್ರಾಮ ಕಾನ್‌ಬೈಲ್ ಅಂಚೆ, ಸುಂಟಿಕೊಪ್ಪ, ಕೊಡಗು | ಸದಸ್ಯರು |
| | | **ರೂಪ ಕೆ.ಎ.** | ಪಿ.ಬಿ.26, ಮರ್ನಾಡ್ ಅಂಚೆ ಕೊಡಗು | ಸದಸ್ಯರು |
| 18 | ಕೋಲಾರ | **ಕಲೈಸೆಲ್ವಿ** | ರಂಗನಾಥನ್ ಕಾಂಪೌಂಡ್, 3ನೇ ಬ್ಲಾಕ್, ರಾಬರ್ಟ್‌ಸನ್‌ಪೇಟ್, ಕೆ.ಜಿ.ಎಫ್, ಕೋಲಾರ | ಅಧ್ಯಕ್ಷರು |
| | | **ಶ್ರೀಧರ್ ಎಸ್.** | 1055, 3ನೇ ಕ್ರಾಸ್, ಹೊಸ ಬಡಾವಣೆ, ಮಹಿಳಾ ಕಾಲೇಜು ಹಿಂಭಾಗ, ಕೋಲಾರ | ಸದಸ್ಯರು |
| | | **ಜಿ.ವಿನೋದ್ ಕುಮಾರ್** | "ಶ್ರೀರಾಮ ನಿಲಯ" ವೈಶ್ಯಾ ಬ್ಯಾಂಕ್ ಬಳಿ, ದೊಡ್ಡಪೇಟೆ, ಕೋಲಾರ | ಸದಸ್ಯರು |
| | | **ಯಶೋದಮ್ಮ ಕೆ.** | ಕನ್ನಸಂದ್ರ, ಮುಳಬಾಗಿಲು ತಾಲ್ಲೂಕು, ಕೋಲಾರ ಜಿಲ್ಲೆ | ಸದಸ್ಯರು |
| | | **ಪೊನ್ನುಮುತ್ತು ಕೆ.** | # 524, ಬಿ.ಜಿ.ಎಂ.ಎಲ್ ಹಾಸ್ಪಿಟಲ್ ಕ್ವಾಟ್ರಸ್, ಮೀಟರ್ ಹೌಸ್ ಹತ್ತಿರ, ಚಾಂಪೀಯನ್ ರೀಫ್, ಕೆ.ಜಿ.ಎಫ್ | ಸದಸ್ಯರು |
| 19 | ಕೊಪ್ಪಳ | **ಎಂ ರಾಜಶೇಖರ್** | ಸಂಗಮೇಶ್ವರ ನಿಲಯ, ಕೀರ್ತಿ ಕಾಲೋನಿ ಮನೆ, # 441, ನೃಪತುಂಗ ಶಾಲೆ ಹತ್ತಿರ, ಕೀರ್ತಿ ಕಾಲೋನಿ, ಭಾಗ್ಯನಗರ, ಕೊಪ್ಪಳ | ಅಧ್ಯಕ್ಷರು |
| | | **ಕಾಳಮ್ಮ** | ಕೋಂ ಈಶಪ್ಪ ಪತ್ತಾರ್, ಮಾನಸ ನಿಲಯ, ಬಿ.ಟಿ.ಪಾಟೀಲನಗರ, ಬ್ಯಾಂಕ್ ಕಾಲೋನಿ, ಕೊಪ್ಪಳ | ಸದಸ್ಯರು |
| | | **ಶೇಖರಗೌಡ ರಾಮತ್ನಾಳ** | ಹಿರೇಅರಳಿಹಳ್ಳಿ, ಪೋಸ್ಟ್ ಯಲಬುರ್ಗಾ ತಾಲ್ಲೂಕು | ಸದಸ್ಯರು |

| | | | | |
|---|---|---|---|---|
| | | | ಕೊಪ್ಪಳ ಜಿಲ್ಲೆ | |
| | | **ನಿಲೋಫರ್** | ವಕೀಲರು, ಹೆಡ್‌ಪೋಸ್ಟ್ ಆಫೀಸ್ ಹತ್ತಿರ ವಿ.ಆರ್.ಎಲ್. ಗೋಡಾನ್ ಎದುರಿಗೆ, ಕೊಪ್ಪಳ | ಸದಸ್ಯರು |
| | | **ಮಹಾಲಿಂಗಪ್ಪ ದೋಟಿಹಾಳ ಕುಷ್ಟಗಿ,** | 3ನೇ ವಾರ್ಡ್, ಬಿ.ಬಿ.ನಗರ, ಕುಷ್ಟಗಿ ತಾಲ್ಲೂಕು, ಕೊಪ್ಪಳ ಜಿಲ್ಲೆ | ಸದಸ್ಯರು |
| 20 | ಮಂಡ್ಯ | **ವೆಂಕಟೇಶ್** | ಬಿನ್ ಮಂಚಯ್ಯ # 404, 7ನೇ ಕ್ರಾಸ್, ಗಾಂಧಿನಗರ, ಮಂಡ್ಯ | ಅಧ್ಯಕ್ಷರು |
| | | **ಎಸ್ ಬೃಂದಾ** | ವಕೀಲರು, ವೀರಭದ್ರೇಶ್ವರ ನಿಲಯ, ಚಾಮುಂಡೇಶ್ವರಿ ನಗರ, ಮಂಡ್ಯ | ಸದಸ್ಯರು |
| | | **ರಾದಕೃಷ್ಣ ಪಿ.ಎಂ** | # 1240/ಎ,–1, ಗುರುದೇವ ಕುಟೀರ, 4ನೇ ಕ್ರಾಸ್, ಅಶೋಕನಗರ, ಮಂಡ್ಯ | ಸದಸ್ಯರು |
| | | **ಎಸ್. ದಾಕ್ಷಾಯಿಣಿ** | ಕೋಂ ಎಂ.ಆರ್.ಎ.ಪ್ರಕಾಶ್, 3ನೇ ಕ್ರಾಸ್, ವಿ.ವಿ.ನಗರ, ಮಂಡ್ಯ | ಸದಸ್ಯರು |
| | | **ಬಿ.ವಿ.ತಿರುಮಲಸ್ವಾಮಿ** | # 160, 1ನೇ ಬ್ಲಾಕ್, ಕಿರಗೋಡು, ಮಂಡ್ಯ ತಾಲ್ಲೂಕು | ಸದಸ್ಯರು |
| 21 | ಮಂಗಳೂರು (ದಕ್ಷಿಣ ಕನ್ನಡ ಜಿಲ್ಲೆ) | **ಆಶಾದೀಪ @ ಆಶಾ ನಾಯಕ್** | # 6, ಸುಕ್ರತ್ ಅಪಾರ್ಟ್‌ಮೆಂಟ್ಸ್, ವಿಠೋಭ ದೇವಸ್ಥಾನ ರಸ್ತೆ, ಮಂಗಳೂರು | ಅಧ್ಯಕ್ಷರು |
| | | **ಲಾವಣ್ಯ ಎ. ಶೆಟ್ಟಿ** | ನವಭಾರತ ವೃತ್ತ ಹತ್ತಿರ, ಪಿ.ವಿ.ಎಸ್. ಕಲಾಕುಂಜ ರಸ್ತೆ, ಕೊಡಿಯಾಲಬೈಲ್, ಮಂಗಳೂರು | ಸದಸ್ಯರು |
| | | **ಡಾ: ಸುಫಲಾ ಎಫ್ ಕೊಟ್ಯಾನ್** | "ಕಂಚಿಲ್" ಅಮೀನ್ ಕಾಂಪೌಂಡ್, 1ನೇ ರೈಲ್ವೆ ಬ್ರಿಡ್ಜ್ ಬಳಿ, ಮಾರ್ನಮಿ ಕಟ್ಟೆ, ಮಂಗಳೂರು | ಸದಸ್ಯರು |
| | | **ಮಹೇಶ್ ಚಂದ್ರ ನಾಯಕ್** | "ರಾಮನಾಥ ಕೃಪಾ", ಹ್ಯೊಗೆ ಬೈಲ್, ಅಶೋಕನಗರ, ಮಂಗಳೂರು | ಸದಸ್ಯರು |
| | | **ಮಂಜುಳಾ ಎ. ರಾವ್** | ಅನಿಲ್ ನಿಲಯ, ಕಲ್ಪನೆ, ಕುಲಶೇಖರ, ಮಂಗಳೂರು | ಸದಸ್ಯರು |
| 22 | ಮೈಸೂರು | **ಎನ್.ಟಿ. ವೆಂಕಟೇಶ್** | ನಂ. 751, 2ನೇ ಕ್ರಾಸ್, ಆಶ್ರಮ ರಸ್ತೆ, ವಿಜಯ ಚಿತ್ರಮಂದಿರ ಹಿಂಭಾಗ, ಹಿನಕಲ್, ಮೈಸೂರು | ಅಧ್ಯಕ್ಷರು |
| | | **ಪರಶುರಾಮ. ಎಂ.ಎಲ್** | 15/2–ಬಿ, ಎಸ್.ಆರ್.ಎಸ್, ಒಡನಾಡಿ ಸೇವಾ ಸಂಸ್ಥೆ, ಹುಟ್ಟಗಳ್ಳಿ, ಮೈಸೂರು | ಸದಸ್ಯರು |
| | | **ಯಶೋದ ಹೆಚ್.ಎಸ್.** | ನಂ.546, 4ನೇ ಮೈನ್, 19ನೇ ಕ್ರಾಸ್, ವಿದ್ಯಾರಣ್ಯಪುರಂ, ಮೈಸೂರು | ಸದಸ್ಯರು |
| | | **ವಿ.ನಳಿನಿ** | ನಂ. 1866, 3ನೇ ಅಡ್ಡರಸ್ತೆ, ಹುಲ್ಲಿನ ಬೀದಿ, ಕೆ.ಆರ್.ಮೊಹಲ್ಲಾ, ಮೈಸೂರು | ಸದಸ್ಯರು |
| | | **ಎ.ಎಸ್.ಶ್ರೀನಿವಾಸ ರಾಜೆ ಅರಸ್** | ಎಲ್.ಐ.ಜಿ–74, 2ನೇ ಹಂತ, ಕೆ.ಹೆಚ್.ಬಿ, ಕುವೆಂಪುನಗರ, ಮೈಸೂರು | ಸದಸ್ಯರು |
| 23 | ರಾಯಚೂರು | **ವೀಣಾ ಪಲ್ಲಕ್ಕಿ,** | # 01–03–290/161, ವಿಜಯನಗರ ಕಾಲೋನಿ, ಆಶಾಪೂರು, ರಾಯಚೂರು | ಅಧ್ಯಕ್ಷರು |
| | | **ಕಿಶನ್‌ರಾವ್, ಆರ್.** | # 1–4, 928/79, 1–4, 929/80, ಐ.ಡಿಎಸ್.ಎಂ.ಟಿ ಲೇಔಟ್, ಎ.ಐ.ಆರ್ ರಸ್ತೆ, ರಾಯಚೂರು | ಸದಸ್ಯರು |
| | | **ಗಂಗಮ್ಮ ಎಂ.ಪಾಟೀಲ್** | ಕೋಂ. ಎಂ.ಪಾಟೀಲ್, 122, ನಿಜಲಿಂಗಪ್ಪ ಕಾಲೋನಿ, ರಾಯಚೂರು | ಸದಸ್ಯರು |
| | | **ಸಿ.ವಿ.ಜಾರ್ಜ್** | ಡಾನ್ ಬಾಸ್ಕೋ ಅಜ್ಜನಹಳ್ಳಿ, ಮಾಗಡಿ ತಾಲ್ಲೂಕು, ಬೆಂಗಳೂರು(ಗ್ರಾ) | ಅಧ್ಯಕ್ಷರು |
| | | **ರತ್ನಮ್ಮ ಸಿ** | # 6, ಉತ್ತರ ಬಡಾವಣೆ, ಬಿ.ಎಂ.ರಸ್ತೆ, | ಸದಸ್ಯರು |

| | | | | |
|---|---|---|---|---|
| | | | ಐಜೂರು ಪೊಲೀಸ್ ಠಾಣೆ ಹಿಂಭಾಗ, ರಾ.ಖಾ.ಸ | |
| 24 | ರಾಮನಗರ | **ಕೃಷ್ಣಮೂರ್ತಿ ಬಿ.** | 6ನೇ ಕ್ರಾಸ್, ಮಾರುತಿನಗರ, ಏರೋಹಳ್ಳಿ ಕ್ರಾಸ್,<br>ಮಹದೇಶ್ವರ ನಗರ ಮುಖ್ಯರಸ್ತೆ,<br>ವಿಶ್ವನೀಡಂ ಅಂಚೆ, ಸುಂಕದ ಕಟ್ಟೆ,<br>ಬೆಂಗಳೂರು (ಪೋಸ್ಟಲ್ ಅಂಚೆ) | ಸದಸ್ಯರು |
| | | **ಜಯಪ್ರಕಾಶ್ ಜೆ.** | 11/4, ಗೆರಿಗಮ್ಮ ನಿಲಯ,<br>ಅಪ್ಪಯ್ಯಣ್ಣ ಕಲ್ಯಾಣ ಮಂಟಪ ಹತ್ತಿರ,<br>2ನೇ ಮುಖ್ಯ ರಸ್ತೆ, ಅತ್ತಿಗುಪ್ಪೆ,<br>ವಿಜಯನಗರ, ಬೆಂಗಳೂರು-40 | ಸದಸ್ಯರು |
| | | **ಶಿವಲಿಂಗಯ್ಯ** | # 1170, ಮೇಘ ನಿಲಯ, 3ನೇ ಅಡ್ಡರಸ್ತೆ,<br>ಎಸ್.ಬಿ.ಎಂ ಹಿಂಭಾಗ, ಕುವೆಂಪುನಗರ,<br>ಚನ್ನಪಟ್ಟಣ ಟೌನ್, ರಾಮನಗರ | ಸದಸ್ಯರು |
| 25 | ಶಿವಮೊಗ್ಗ | **ಆನಂದ ಜಿ.ಪಿಳ್ಳೈ** | ಕೆ.ಪಿ.ಸಿ ವಸತಿ ಗೃಹ, ಸಿ3/2 ಕಾರ್ಗಲ್ ಕಾಲೋನಿ,<br>ಕಾರ್ಗಲ್, ಸಾಗರ ತಾಲ್ಲೂಕು | ಅಧ್ಯಕ್ಷರು |
| | | **ಸಂಧ್ಯಾ ಕಾವೇರಿ ಕೆ.** | "ಅಕ್ಷಯ", ಬಸವೇಶ್ವರನಗರ, ಶಿವಮೊಗ್ಗ | ಸದಸ್ಯರು |
| | | **ಶ್ಯಾಮಲಾ ಶಾಸ್ತ್ರಿ** | ಗುರುಕುಲ, ಭಂಡಾರಿ ಗ್ಯಾಸ್, ಗೋಡನ್ ಪಕ್ಕ,<br>ನವುಲೆ, ಶಿವಮೊಗ್ಗ | ಸದಸ್ಯರು |
| | | **ಬಿ. ಶಿವಾನಂದಪ್ಪ** | ಬಸವೇಶ್ವರನಗರ, 3ನೇ ಕ್ರಾಸ್, ಸುಶೀರ ನಿಲಯ,<br>ಸವಳಂಗ ರಸ್ತೆ, ಶಿವಮೊಗ್ಗ | ಸದಸ್ಯರು |
| | | **ಬಿ.ವಿ.ಗೀತಾ ಶಿವಮೂರ್ತಿ** | ಗುರು ಸಾಯಿನಿಲಯ, # 1788.60 ಅಡಿ ರಸ್ತೆ,<br>2ನೇ ಕ್ರಾಸ್, ವಿನೋಭನಗರ, ಶಿವಮೊಗ್ಗ | ಸದಸ್ಯರು |
| 26 | ತುಮಕೂರು | **ಬಿ.ಎಸ್.ನಂದಕುಮಾರ್** | # 155/ಜಿ, 1ನೇ ಕ್ರಾಸ್, ರೇವಣ ಸಿದ್ದಪ್ಪ<br>ಬಡಾವಣೆ, ಷಡಕ್ಷರಿ ಮಠದ ಹತ್ತಿರ, ತಿಪಟೂರು | ಅಧ್ಯಕ್ಷರು |
| | | **ಈರಣ್ಣ** | ಕೆಂಪನದೊಡ್ಡೇರಿ, ಕೆಂಪನದೊಡ್ಡೇರಿ ಅಂಚೆ,<br>ತುಮಕೂರು | ಸದಸ್ಯರು |
| | | **ವೀರೇಂದ್ರ ಪ್ರಸಾದ್** | ಬಿನ್ ವೀರಕ್ಯಾತಯ್ಯ, ಗರಗದೊಡ್ಡಿ,<br>ದಾಸರಹಳ್ಳಿ ಅಂಚೆ, ಕೊರಟಗೆರೆ ತಾಲ್ಲೂಕು,<br>ತುಮಕೂರು ಜಿಲ್ಲೆ. | ಸದಸ್ಯರು |
| | | **ಎಸ್.ಸಿ. ರಾಜ್‌ಕುಮಾರ್** | ಸಾಂತ್ವಾನ ಕೇಂದ್ರ, ಎನ್‌ಇಪಿಎಸ್ ಠಾಣೆ ಎದುರು,<br>ಶ್ರೀ ನರ್ಸಿಂಗ್ ಹೋಂ ಮಹಡಿ,<br>ಶಂಕರಪುರಂ, ತುಮಕೂರು | ಸದಸ್ಯರು |
| | | **ಮುಜೀಬ್ ಉನ್ನೀಸಾ ಕೆ.ಎಲ್.** | ವಕೀಲರು, 2ನೇ ಬ್ಲಾಕ್, 3ನೇ ಮೈನ್ ರೋಡ್,<br>ಕುವೆಂಪುನಗರ, ತುಮಕೂರು | ಸದಸ್ಯರು |
| 27 | ಉಡುಪಿ | **ಜ್ಯೋತಿ ಕೆ.ಶೆಟ್ಟಿ** | ಬಪ್ಪುಶೆಟ್ಟಿ ಹೌಸ್, ಪಡುಗ್ರಾಮ ಪೋಸ್ಟ್,<br>ಕಾಪು, ಉಡುಪಿ | ಅಧ್ಯಕ್ಷರು |
| | | **ಬಿ.ಕೆ.ನಾರಾಯಣ** | "ನಂದಗೋಕುಲಾ", ಅಲೆವೂರು ರಸ್ತೆ,<br>ಮಣಿಪಾಲ | ಸದಸ್ಯರು |
| | | **ಮುರುಳಿಧರ್ ಶೆಣೈ. ಹೆಚ್** | ವಕೀಲರು, ಬಿನ್ ಹೆಚ್. ಮಾಧವ ಶೆಣೈ,<br>ಶ್ರೀ ನಾಗೇಶ್ ಮಹಾಲಕ್ಷ್ಮೀ ಕೃಪ,<br>ರಾಮಕೃಷ್ಣ ಭವನದ ಹಿಂಬದಿ, ಚಿಟ್ಪಾಡಿ, ಉಡುಪಿ | ಸದಸ್ಯರು |
| | | **ಕೆ. ಜಿ. ಶ್ರೀಪಾದರಾವ್** | ನ್ಯಾಯವಾದಿ, ಬಂಡೀಮಠ, ಹನೆಹಳ್ಳಿ ಅಂಚೆ,<br>ಉಡುಪಿ ತಾಲ್ಲೂಕು | ಸದಸ್ಯರು |
| | | **ಬಿ. ನಾಗರಾಜ್** | ರೂಂ ನಂ.5, ವಾಸುಕೀ ಟವರ್ಸ್ ತಾಲ್ಲೂಕು<br>ಕಛೇರಿ ಸರ್ಕಲ್ ಬಳಿ, ಉಡುಪಿ | ಸದಸ್ಯರು |
| 28 | ಕಾರವಾರ | **ಫಾದರ್ ಬಸ್ತ್ಯ ಫರ್ನಾಂಡಿಸ್** | ಕೆ.ಡಿ.ಡಿ.ಸಿ, ಸಮಾಜ ಸೇವಾ ಸಂಸ್ಥೆ,<br>ಬಿಷಪ್ಸ್ ಹೌಸ್, ಬೈತಕೋಲ ಅಂಚೆ, ಕಾರವಾರ | ಅಧ್ಯಕ್ಷರು |
| | | **ಅನು ಮನೋಹರ್ ಕಳಸ** | ನಂ.634, ಕೆಂಚಾ ರಸ್ತೆ, ಕಾಜುಬಾಗ, | ಸದಸ್ಯರು |

| | | | | |
|---|---|---|---|---|
| | (ಉತ್ತರ ಕನ್ನಡ) | | ಕಾರವಾರ, ಉತ್ತರ ಕನ್ನಡ | |
| | | **ಸಂತೋಷ ಗಜಾನನ ಹೆಗಡೆ** | ಮನೆ ನಂ.111, ಕೆ.ಹೆಚ್.ಬಿ ಕಾಲೋನಿ, ಶಿರಸಿ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ | ಸದಸ್ಯರು |

**ಎಸ್.ಎನ್. ಕೃಷ್ಣಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ-1
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

ಪಿ.ಆರ್. 2639

## ಕಾರ್ಮಿಕ ಸಚಿವಾಲಯ

**ವಿಷಯ :** ಶ್ರೀ ಕೆ.ಬಿ. ಸಿದ್ದಲಿಂಗಯ್ಯ, ಸಹಾಯಕ ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇಲಾಖೆ. ಇವರು, ತಹಶೀಲ್ದಾರ್ ಕಛೇರಿ, ನೆಲಮಂಗಲ ತಾಲ್ಲೂಕು, ಇಲ್ಲಿ ನಿಯೋಜನೆ ಮೇಲೆ ಕಾರ್ಯ ನಿರ್ವಹಿಸುತ್ತಿದ್ದಾಗ ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿ ಕುರಿತು-ಆದೇಶ.

**ಓದಲಾಗಿದೆ :** 1) ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ).ಬಿಡಿ-17/ಸಿಆರ್-07/2007 ಬಿಎಲ್‌ಆರ್ ದಿನಾಂಕ: 05-04-2010.

2) ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3) ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಕಂಇ 18 ಎಡಿಇ 2007, ದಿನಾಂಕ: 02-08-2010.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಪತ್ರ ಬರೆದು ಶ್ರೀ ಕೆ.ಬಿ.ಸಿದ್ದಲಿಂಗಯ್ಯ ಅಂದಿನ ತಹಶೀಲ್ದಾರ್, ತಹಶೀಲ್ದಾರ್ ಕಛೇರಿ, ನೆಲಮಂಗಲ ತಾಲ್ಲೂಕು ಇವರು ಸರ್ವೆ ನಂ.204ರ ಜಮೀನಿಗೆ ಸೇರಿದಂತೆ ಎಂ.ಆರ್.ನಂಬರ್ ಅನ್ನು ಸರ್ವೆ ನಂ.206ರ ಎಂ.ಆರ್.6/89-90 ಅದಲು ಬದಲು ಹಾಕಿದ್ದು, ಈ ತಪ್ಪುಗಳನ್ನು ತಿದ್ದುಪಡಿ ಮಾಡಲು ರೂ. 3 ಲಕ್ಷಗಳ ಲಂಚವನ್ನು ಪಡೆದಿರುತ್ತಾರೆ ಎನ್ನುವ ಬಗ್ಗೆ ವಿರುದ್ಧ ದಾಖಲಾಗಿರುವ ಟ್ರ್ಯಾಪ್ ಪ್ರಕರಣಕ್ಕೆ ಸಂಬಂಧಿಸಿದಂತೆ ಭ್ರಷ್ಟಾಚಾರ ನಿರ್ಮೂಲನ ಕಾಯ್ದೆ 1988 ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ 13(2) ರ ಅಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜನೆಗೊಳಪಡಿಸಲು ಭ್ರಷ್ಟಾಚಾರ ನಿರ್ಮೂಲನ ಕಾಯ್ದೆ 1988 ರ ಕಲಂ 19(1)(ಬಿ) ರನ್ವಯ ಮಂಜೂರಾತಿ ನೀಡಬೇಕಾಗಿ ಕೋರಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3) ಇವರ ಅನಧಿಕೃತ ಟಿಪ್ಪಣಿಯಲ್ಲಿ ಶ್ರೀ ಕೆ.ಬಿ. ಸಿದ್ದಲಿಂಗಯ್ಯ, ಹಿಂದಿನ ತಹಶೀಲ್ದಾರ್, ನೆಲಮಂಗಲ ಇವರು ಉದ್ಯೋಗ ಮತ್ತು ತರಬೇತಿ ಇಲಾಖೆಯಿಂದ ನಿಯೋಜನೆಯ ಮೇಲೆ ನೆಲಮಂಗಲ ತಹಶೀಲ್ದಾರರಾಗಿ ಕಾರ್ಯ ನಿರ್ವಹಿಸಿದ್ದಾರೆ. ಆದ್ದರಿಂದ ಈ ಅಧಿಕಾರಿಯ ನೇಮಕಾತಿ ಪ್ರಾಧಿಕಾರವು ಕಾರ್ಮಿಕ ಇಲಾಖೆಯಾಗಿದ್ದು, ಸಕ್ಷಮ ಪ್ರಾಧಿಕಾರವು ಕಾರ್ಮಿಕ ಇಲಾಖೆಯಾಗಿರುವುದರಿಂದ ಲೋಕಾಯುಕ್ತರ ಪ್ರಸ್ತಾವನೆಗೆ ಅನುಮತಿ ನೀಡಲು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು, ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ (1)ರಲ್ಲಿ ಓದಲಾದ ಪತ್ರದ ಜೊತೆಯಲ್ಲಿ ಕಳುಹಿಸಿರುವ ವರದಿಯನ್ನು ಪರಿಶೀಲಿಸಿದಾಗ, ಈ ಕೆಳಕಂಡ ಅಂಶಗಳು ಕಂಡುಬರುತ್ತವೆ.

1) ಲಂಚದ ಹಣ ₹.2,70,000/-ಗಳನ್ನು ತಹಶೀಲ್ದಾರ್‌ರವರು ತೆಗೆದುಕೊಳ್ಳದೇ ಖಾಸಗಿ ಮಧ್ಯವರ್ತಿಯಾದ ಶ್ರೀ ಲೋಕೇಶ್‌ರವರ ಕೈಗೆ ಕೊಡುವಂತೆ ತಿಳಿಸಿದರೆಂದು, ಆ ಪ್ರಕಾರ ಮಧ್ಯವರ್ತಿಯಾದ ಶ್ರೀ ಲೋಕೇಶ್‌ರವರ ಕೈಗೆ ಹಣವನ್ನು ಕೊಟ್ಟಿದ್ದೆನು ಎನ್ನುವುದಾಗಿ ಪಿರ್ಯಾದುದಾರರು ತಿಳಿಸಿರುತ್ತಾರೆ.

2) ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಆರೋಪಿತ ತಹಶೀಲ್ದಾರ್‌ರವರ ಬಲಗೈ ಬೆರಳನ್ನು ಹಾಗೂ ಎಡಗೈ ಬೆರಳನ್ನು ಅದ್ದಿಸಿ ತೋರಿಸಿದಾಗ ದ್ರಾವಣ ಯಾವುದೇ ಬಣ್ಣಕ್ಕೆ ತಿರುಗದೇ ಬರೀ ಕಣ್ಣಿಗೆ ಕಾಣಿಸುವುದಿಲ್ಲ ಎನ್ನುವುದಾಗಿ ವರದಿಯಲ್ಲಿ ನಮೂದಿಸಲಾಗಿದೆ.

3) ಖಾಸಗಿ ಮಧ್ಯವರ್ತಿಯಾದ ಶ್ರೀ ಲೋಕೇಶ್‌ರವರ ಬಲಗೈ ಹಾಗೂ ಎಡಗೈ ಬೆರಳುಗಳನ್ನು ಸೋಡಿಯಮ್ ಕಾರ್ಬೋನೇಟ್ ದ್ರಾವಣದಲ್ಲಿ ಅದ್ದಿಸಿ ತೊಳಿಸಿದಾಗ, ಸದರಿ ದ್ರಾವಣವು ತಿಳಿ ಗುಲಾಬಿ ಬಣ್ಣಕ್ಕೆ ತಿರುಗಿರುತ್ತದೆ ಎನ್ನುವುದಾಗಿ ವರದಿಯಲ್ಲಿ ನಮೂದಿಸಲಾಗಿದೆ.

4) ಖಾಸಗಿ ಮಧ್ಯವರ್ತಿಯಾದ ಶ್ರೀ ಲೋಕೇಶ್‌ರವರನ್ನು, ಫಿರ್ಯಾದುದಾರರಿಂದ ಪಡೆದುಕೊಂಡಿರುವ ಲಂಚದ ಹಣದ ಬಗ್ಗೆ ತಮ್ಮ ಹೇಳಿಕೆ ಏನು ಎಂದು ಕೇಳಿದಾಗ, ಅವರು ತಮ್ಮ ಹೇಳಿಕೆಯನ್ನು ತಮ್ಮ ಕೈ ಬರವಣಿಗೆಯಲ್ಲಿ ಬರೆದು ಕೊಟ್ಟಿರುತ್ತಾರೆಂದು ವರದಿಯಲ್ಲಿ ನಮೂದಿಸಲಾಗಿದೆ. ಆದರೆ ಏನು ಬರೆದುಕೊಟ್ಟಿರುತ್ತಾರೆ ಎನ್ನುವುದನ್ನು ವರದಿಯಲ್ಲಿ ನಮೂದಿಸಿರುವುದಿಲ್ಲ. ಶ್ರೀ ಲೋಕೇಶ್‌ರವರು ಬರೆದು ಕೊಟ್ಟಿರುವ ಹೇಳಿಕೆಯು ಈ ಕೆಳಗಿನಂತೆ ಇದೆ.

> "ನಾನು ಜಗದೀಶ್ ಮತ್ತು ನಾನು ಜಿ.ಎಸ್.ಲೋಕೇಶ್ ಇಬ್ಬರೂ ತಾಲ್ಲೂಕು ಕಛೇರಿ ಹತ್ತಿರ ಬಂದಿದ್ದೆವು. ಜಗದೀಶ್‌ರವರು ನನಗೆ ಈ ಹಣವನ್ನು ಮಡಿಕೋ ಎಂದು ಹೇಳಿ ಕರೆದುಕೊಂಡು ಹೋದರು ಮತ್ತು ಇದರ ಬಗ್ಗೆ ನನಗೆ ಏನೂ ಗೊತ್ತಿರುವುದಿಲ್ಲ. ಇವರು ಜೋತೆಯಲ್ಲಿ ನನ್ನನ್ನು ಯಾವಾಗಲೂ ಕರೆದುಕೊಂಡು ಹೋಗುವರು ಮತ್ತು ಅವರ ವ್ಯವಹಾರಗಳು ನನಗೆ ತಿಳಿದಿರುವುದಿಲ್ಲ. ಆವಾಗ ನನಗೆ ಸೈಟು ವ್ಯವಹಾರ ಮಾಡುತ್ತೇನೆಂದು ತಿಳಿಸಿರುತ್ತಾರೆ ಹಾಗೂ ನಾವಿಬ್ಬರೂ ಸೈಟನ್ನು ಯಾರಿಗಾದರೂ ಮಾರಾಟ ಮಾಡಿದರೂ, ಕೊಡಿಸಿದರೂ ನನಗೂ ಸ್ವಲ್ಪ ಹಣ ಕೊಡುವರು."

ಮೇಲಿನ ಅಂಶಗಳನ್ನು ಪರಿಶೀಲಿಸಿದಾಗ, ಕಾರ್ಬೋನೇಟ್ ದ್ರಾವಣದಲ್ಲಿ ತಹಶೀಲ್ದಾರ್‌ರವರ ಕೈ ಬೆರಳನ್ನು ಅದ್ದಿಸಿದಾಗ ದ್ರಾವಣ ಯಾವುದೇ ಬಣ್ಣಕ್ಕೆ ತಿರುಗದೇ ಇರುವ ಕಾರಣ, ಇವರು ಲಂಚವನ್ನು ತೆಗೆದುಕೊಂಡಿಲ್ಲದೇ ಇರುವುದು ಸ್ಪಷ್ಟವಾಗುತ್ತದೆ. ಅಲ್ಲದೆ, ಶ್ರೀ ಲೋಕೇಶ್‌ರವರು ತಮ್ಮ ಹೇಳಿಕೆಯಲ್ಲಿ, ಫಿರ್ಯಾದುದಾರರಾದ ಶ್ರೀ ಜಗದೀಶ್ ಮತ್ತು ತಾನು ಕಛೇರಿಗೆ ಬಂದಿದ್ದು, ಶ್ರೀ ಜಗದೀಶ್‌ರವರು ಹಣವನ್ನು ಮಡಿಕೋ ಎಂದು ಹೇಳಿ ತನ್ನನ್ನು ಕರೆದುಕೊಂಡು ಹೋದರು ಮತ್ತು ಅವರಿಬ್ಬರು ಸೈಟನ್ನು ಯಾರಿಗಾದರೂ ಮಾರಾಟ ಮಾಡಿಸಿದರೆ, ಕೊಡಿಸಿದರೆ ನನಗೆ ಸ್ವಲ್ಪ ಹಣವನ್ನು

ಕೊಡುತ್ತಾರೆಂದು ಹೇಳಿರುವ ಕಾರಣ, ಫಿರ್ಯಾದುದಾರರಾದ ಶ್ರೀ ಜಗದೀಶ್‌ರವರು ತಾಲ್ಲೂಕು ಕಛೇರಿಯ ಹೊರ ಆವರಣದಲ್ಲಿ ಶ್ರೀ ಜಿ.ಎಸ್.ಲೋಕೇಶ್ ಇವರಿಗೆ ₹.2,70,000/-ಗಳನ್ನು ನೀಡಿ, ಕಛೇರಿ ಒಳಗಡೆ ಕರೆದುಕೊಂಡು ಹೋಗಿರುವ ಸಾಧ್ಯತೆ ಇರುತ್ತದೆ. ಶ್ರೀ ಲೋಕೇಶ್‌ರವರ ಹೇಳಿಕೆಯನ್ನು ವರದಿಯಲ್ಲಿ ದಾಖಲಿಸದೇ ಇರುವುದು ಈ ಅನುಮಾನಕ್ಕೆ ಎಡೆಗೊಡುತ್ತದೆ. ಆದುದರಿಂದ, ಫಿರ್ಯಾದುದಾರರು ಯಾವುದಾದರೂ ವೈಯಕ್ತಿಕ ಕಾರಣಗಳಿಂದ ತಹಶೀಲ್ದಾರ್‌ರವರಿಗೆ ತೊಂದರೆ ಕೊಡುವ ಉದ್ದೇಶದಿಂದ ಮಾನ್ಯ ಲೋಕಾಯುಕ್ತರವರಿಗೆ ದೂರನ್ನು ನೀಡಿ, ತನ್ನ ವ್ಯವಹಾರದಲ್ಲಿ ಭಾಗಿಯಾಗಿರುವ

ಶ್ರೀ ಲೋಕೇಶ್‌ರವರಿಗೆ ಫಿನಾಫ್ತಲಿನ್ ಪುಡಿಯನ್ನು ಲೇಪನ ಮಾಡಿರುವ ನೋಟುಗಳನ್ನು ನೀಡಿ, ಅದನ್ನು ಜೇಬಿನಲ್ಲಿ ಇಟ್ಟುಕೊಳ್ಳುವಂತೆ ತಿಳಿಸಿ, ಅವರನ್ನು ಕರೆದುಕೊಂಡು ತಹಶೀಲ್ದಾರ್ ಇದ್ದ ಮೀಟಿಂಗ್ ಹಾಲ್‌ಗೆ ಕರೆದುಕೊಂಡು ಹೋಗಿರುವ ಸಾಧ್ಯತೆಯನ್ನು ತಳ್ಳಿ ಹಾಕಲು ಬರುವುದಿಲ್ಲ.

ಈ ಎಲ್ಲಾ ಕಾರಣಗಳಿಂದ ಶ್ರೀ ಕೆ.ಬಿ. ಸಿದ್ದಲಿಂಗಯ್ಯ ಇವರ ವಿರುದ್ಧ ಅಭಿಯೋಜನೆಗೆ ಮಂಜೂರಾತಿ ನೀಡುವ ಅವಶ್ಯಕತೆ ಇಲ್ಲವೆಂದು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಕಾಇ 45 ಇಟಿಎಕ್ಸ್ 2010 ಬೆಂಗಳೂರು, ದಿನಾಂಕ : 13/10/2010.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಭ್ರಷ್ಟಾಚಾರ ನಿರ್ಮೂಲನ ಕಾಯ್ದೆ 1988 ರ ಕಲಂ 19(1)(ಬಿ) ರನ್ವಯ ಶ್ರೀ ಕೆ.ಬಿ. ಸಿದ್ದಲಿಂಗಯ್ಯ, ಸಹಾಯಕ ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇಲಾಖೆ, ಇವರು, ತಹಶೀಲ್ದಾರ್ ಕಛೇರಿ, ನೆಲಮಂಗಲ ತಾಲ್ಲೂಕು, ಇಲ್ಲಿ ನಿಯೋಜನೆ ಮೇಲೆ ಕಾರ್ಯ ನಿರ್ವಹಿಸುತ್ತಿದ್ದಾಗ ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣಕ್ಕೆ ಸಂಬಂಧಿಸಿದಂತೆ ಇವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವುದನ್ನು ನಿರಾಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್.ವಿಶ್ವೇಶ್ವರಯ್ಯ**

ಪೀಠಾಧಿಕಾರಿ

ಕಾರ್ಮಿಕ ಇಲಾಖೆ

ಪಿ.ಆರ್. 2640 (ಉದ್ಯೋಗ ಮತ್ತು ತರಬೇತಿ)

## FINANCE SECRETARIAT

### CORRIGENDUM

No. FD 29 SRP 2010, Bangalore, Dated 28th October 2010

**Sub :-** Revision of the rates of House Rent Allowance in respect of State Government Employees

In order portion of the Government Order No. FD 29 SRP 2010 dated 28th October 2010, the words and figures "1st January 2010" shall be read as "1-11-2010"

By Order and in the name of the Governor of Karnataka

**K. S. Gopala Krishna**

Deputy Secretary to Government

Finance Department (Services-2)

## ಆರ್ಥಿಕ ಸಚಿವಾಲಯ

ತಿದ್ದೋಲೆ

ಸಂಖ್ಯೆ: ಎಫ್‌ಡಿ 29 ಎಸ್‌ಆರ್‌ಪಿ 2010, ಬೆಂಗಳೂರು, ದಿನಾಂಕ 28-10-2010

**ವಿಷಯ** : ರಾಜ್ಯ ಸರ್ಕಾರಿ ನೌಕರರ ಮನೆ ಬಾಡಿಗೆ ಭತ್ಯೆ ದರಗಳ ಪರಿಷ್ಕರಣೆ ಕುರಿತು

***

ದಿನಾಂಕ 28-10-2010ರ ಸಂಖ್ಯೆ: ಎಫ್‌ಡಿ 29 ಎಸ್‌ಆರ್‌ಪಿ 2010ರ ಸರ್ಕಾರಿ ಆದೇಶದ, ಆದೇಶದ ಭಾಗದಲ್ಲಿನ "ದಿನಾಂಕ 1ನೇ ಜನವರಿ 2010" ಎಂಬುದರ ಬದಲಿಗೆ "ದಿನಾಂಕ 1-11-2010" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಎಸ್. ಗೋಪಾಲಕೃಷ್ಣ**

ಸರ್ಕಾರದ ಉಪ ಕಾರ್ಯದರ್ಶಿ

ಪಿ.ಆರ್. ನಂ. 2701 ಆರ್ಥಿಕ ಇಲಾಖೆ (ಸೇವೆಗಳು-2)

## ಕನ್ನಡ ಮತ್ತು ಸಂಸ್ಕೃತಿ , ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯಲ್ಲಿನ ಪುರಾತತ್ವ ಸಂರಕ್ಷಣಾ ಸಹಾಯಕರುಗಳು/ಜೂನಿಯರ್ ಇಂಜಿನಿಯರ್ ಹುದ್ದೆಗಳ ಕೇಂದ್ರ ಸ್ಥಾನವನ್ನು ನಿಗದಿಗೊಳಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂ : ಕಸಂವಾಪ್ರ 70 ಸ್ವಿಮರ 2007 ದಿನಾಂಕ : 18-08-2007

2. ಸರ್ಕಾರದ ಆದೇಶ ಸಂ : ಕಸಂವಾಪ್ರ 99 ಕೆಎಂಯು 2010 ದಿನಾಂಕ : 06–08–2010
3. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಇವರ ದಿನಾಂಕ : 16–09–2010 ರ ಪತ್ರ ಸಂ : ಡಿಎಎಂ:ಇಎಸ್‌ಟಿ.1:ಕಸಂ.348(3) : 2010–11/258

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ : 18–08–2007ರ ಸರ್ಕಾರಿ ಆದೇಶದಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ 2007–08ನೇ ಸಾಲಿನ ಮುಂದುವರೆದ ಯೋಜನಾ ಕಾರ್ಯಕ್ರಮದ ಹೊಸ ಘಟಕಗಳಡಿಯಲ್ಲಿ 4 ಪುರಾತತ್ವ ಸಂರಕ್ಷಣಾ ಸಹಾಯಕರ ಹುದ್ದೆಗಳನ್ನು 12ನೇ ಹಣಕಾಸು ಆಯೋಗದ ಅವಧಿಯವರೆಗೆ ಸೃಜಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ : 06–08–2010ರ ಸರ್ಕಾರಿ ಆದೇಶದಲ್ಲಿ ಸದರಿ 4 ಹುದ್ದೆಗಳನ್ನು ದಿನಾಂಕ : 01–04–2010ರಿಂದ 31–03–2011ರವರೆಗೆ ಒಂದು ವರ್ಷದ ಅವಧಿಗೆ ಮುಂದುವರೆಸಿ ಆದೇಶಿಸಿದೆ.

ಸದರಿ 4 ಸಂರಕ್ಷಣಾ ಸಹಾಯಕರ ಹುದ್ದೆಗಳು ಕೇಂದ್ರ ಸ್ಥಾನ ಮೈಸೂರಿನಲ್ಲಿದ್ದು, ಅವುಗಳಿಗೆ ಈಗ ಸಹಾಯಕ ನಿರ್ದೇಶಕರ ಕಛೇರಿ ಶಿವಮೊಗ್ಗ, ಕ್ಯೂರೇಟರ್ ಕಛೇರಿ, ಮಂಗಳೂರು, ಕ್ಯೂರೇಟರ್ ಕಛೇರಿ ಗುಲ್ಬರ್ಗಾ, ಹಾಗೂ ಕ್ಯೂರೇಟರ್ ಕಛೇರಿ ಗದಗ, ಇಲ್ಲಿಗೆ ತಲಾ ಒಂದೊಂದು ಹುದ್ದೆಗಳನ್ನು ನಿಗದಿಪಡಿಸಿ ಕೇಂದ್ರಸ್ಥಾನ ಬದಲಾಯಿಸುವಂತೆ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಇವರು ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 62 ಕೆಎಂಯು 2010, ಬೆಂಗಳೂರು, ದಿನಾಂಕ : 15–11–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಇಲ್ಲಿಗೆ 2007–08ನೇ ಸಾಲಿನ ಮುಂದುವರೆದ ಯೋಜನಾ ಕಾರ್ಯಕ್ರಮದ ಹೊಸ ಘಟಕಗಳಡಿಯಲ್ಲಿ ಮಂಜೂರಾದ ನಾಲ್ಕು(4) ಪುರಾತತ್ವ ಸಂರಕ್ಷಣಾ ಸಹಾಯಕರುಗಳ ಹುದ್ದೆಗಳನ್ನು 4 ಉಪನಿರ್ದೇಶಕರ ಕಾರ್ಯವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸಲು ಅನುವಾಗುವಂತೆ ತಲಾ ಒಂದೊಂದರಂತೆ ಶಿವಮೊಗ್ಗ, ದಕ್ಷಿಣ ಕನ್ನಡ, ಗುಲ್ಬರ್ಗಾ ಮತ್ತು ಗದಗ ಕೇಂದ್ರ ಸ್ಥಾನ ನಿಗದಿಪಡಿಸಿ ಆದೇಶಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–05–2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪತ್ಯಾಯೋಜನೆಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಕೆ. ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

ಪಿ. ಆರ್. 2848

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರ ಐತೀರ್ಪಿನಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರ ಇವರ ಪತ್ರ ಸಂಖ್ಯೆ: ಮುಇಂ/ಸನೀ(ಉ) ವ /ಬಿಜಾ/ಭೂಸ್ವಾಪ್ರ/2010–11/4708, ದಿನಾಂಕ: 18–08–10.

**ಪ್ರಸ್ತಾವನೆ :**

ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಪುರ ಗ್ರಾಮದ ಸರ್ವೆ ನಂಬರ್‌ಗಳ ಜಮೀನುಗಳಿಗೆ ಕೊಪ್ಪಳದ ಸಿವಿಲ್ ನ್ಯಾಯಾಲಯವು (ಹಿರಿಯ ವಿಭಾಗ) ಎಲ್.ಎ.ಸಿ. ಪ್ರಕರಣ ಸಂಖ್ಯೆ : 10/04 ರಲ್ಲಿ ದಿನಾಂಕ : 09–03–05ರಂದು ನೀಡಿರುವ ಆದೇಶವನ್ನು ಆಧರಿಸಿ ಸ್ವಾಧೀನಕ್ಕೊಳಪಟ್ಟ ಇತರೆ ಜಮೀನುಗಳಿಗೆ ಉಪವಿಭಾಗಾಧಿಕಾರಿ ಮತ್ತು ಭೂಸ್ವಾಧೀನಾಧಿಕಾರಿಗಳು ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ರಚಿಸಿರುವ ಐತೀರ್ಪಿನಂತೆ ಮೊತ್ತ ರೂ. 57,68,155–00ಗಳನ್ನು ಬಿಡುಗಡೆ ಮಾಡುವಂತೆ ಮೇಲೆ ಓದಲಾದ ದಿನಾಂಕ : 07–06–10ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಕೋರಿದ್ದಾರೆ.

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರ ಅಧಿಸೂಚನೆ ದಿನಾಂಕ : 04–01–2001ರ ಪ್ರಕಾರ ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ದಿನಾಂಕ : 25–02–03ರಂದು ರಚಿಸಿದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಕೊಪ್ಪಳ ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ)ದಲ್ಲಿ ದಾಖಲಿಸಿದ್ದ ಎಲ್.ಎ.ಸಿ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಮುಖ್ಯ ಪ್ರಕರಣ ಸಂಖ್ಯೆ : 10/04ರಲ್ಲಿ ದಿನಾಂಕ : 09–03–05ರಂದು ನೀಡಿರುವ ಆದೇಶದಲ್ಲಿ ಹೆಚ್ಚಿನ ಪರಿಹಾರಧನ ನಿಗದಿಪಡಿಸಿದೆ. ಸಿವಿಲ್ ನ್ಯಾಯಾಲಯದ ತೀರ್ಪನ್ನು ಆಧರಿಸಿ ಭೂಸ್ವಾಧೀನದಲ್ಲಿ ಸೇರಿದ್ದ ಇತರೆ ಈ ಕೆಳಕಂಡ ಸ.ನಂ.ಗಳ ಭೂಮಾಲೀಕರು ಹೆಚ್ಚಿನ ಪರಿಹಾರ ಕೋರಿ ಸಲ್ಲಿಸಿದ ಅರ್ಜಿಯ ಮೇರೆಗೆ ಉಪವಿಭಾಗಾಧಿಕಾರಿ ಹಾಗೂ ಭೂಸ್ವಾಧೀನಾಧಿಕಾರಿಗಳು, ಕೊಪ್ಪಳ ಇವರು ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ದಿನಾಂಕ : 19–06–10ರಂದು ಐತೀರ್ಪನ್ನು ರಚಿಸಿರುತ್ತಾರೆ.

| ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ಐತೀರ್ಪಿನ ಸಂಖ್ಯೆ ಸ.ಇಂ. ಭೂಸ್ವಾ/ಸಾ/14/28(ಎ) ಅಪೀಲು/2000–01, ದಿನಾಂಕ : 19–06–10 |
|---|

| ಕ್ರ.ಸಂ. | ಪುರ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ. ಗಳಲ್ಲಿ) |
|---|---|---|---|

| | | | |
|---|---|---|---|
| 1 | 8/A | 4–00 | 1329833 |
| 2 | 8/B | 1–00<br>0–01(PK)<br>0-39 | 324149 |
| 3 | 8/C | 1–29<br>0–01 (PK)<br>1-30 | 573491 |
| 4 | 11/B | 1–00 | 332457 |
| 5 | 11/C | 1–38 | 648293 |
| 6 | 13/B | 0–22 | 182854 |
| 7 | 117/2 | 2–05 | 706475 |
| 8 | 117/8 | 5–01 | 1670603 |
| | | **ಒಟ್ಟು** | **5768155** |

ಮುಖ್ಯ ಇಂಜಿನಿಯರ್‌ರವರ ಮೇಲ್ಕಂಡ ಎರಡು ಪ್ರಸ್ತಾವನೆಗಳನ್ನು ಮತ್ತು ಭೂಸ್ವಾಧೀನ ಕಾಯ್ದೆಯ ವಿಧಿ ವಿಧಾನಗಳಂತೆ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 130 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ : 08ನೇ ನವೆಂಬರ್ 2010**

ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಪುರ ಗ್ರಾಮದ ಸರ್ವೆ ನಂಬರ್ 8/ಎ, 8/ಬಿ, 8/ಸಿ, 11/ಬಿ, 11/ಸಿ, 13/ಬಿ, 117/2, 117/8ರ ಜಮೀನುಗಳಿಗೆ ಕೊಪ್ಪಳದ ಉಪ ವಿಭಾಗಾಧಿಕಾರಿ ಮತ್ತು ಭೂಸ್ವಾಧೀನಾಧಿಕಾರಿಗಳು ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ರಚಿಸಿರುವ ಐತೀರ್ಪಿನಂತೆ ಹೆಚ್ಚಿನ ಪರಿಹಾರ ಧನ ಪಾವತಿಸಲು ರೂ. 57,68,155–00 ಗಳನ್ನು ಒಟ್ಟು (ಐವತ್ತೆಂಟು ಲಕ್ಷದ ಅರವತ್ತೆಂಟು ಸಾವಿರದ ನೂರ ಐವತ್ತೈದು ರೂಪಾಯಿಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಪಾವತಿಸಲು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಲೆಕ್ಕಾಚಾರ ತಃಖ್ತೆಯನ್ನು ಮತ್ತೊಮ್ಮೆ ದೃಢೀಕರಿಸಿಕೊಂಡು ಪಾವತಿಸತಕ್ಕದ್ದು, ಎರಡನೇಬಾರಿ ಹೆಚ್ಚಿನ ಮೊತ್ತ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಮತ್ತೊಮ್ಮೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20–10–2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ. ಆರ್. 2849

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಹೆಚ್. ನಂಜಯ್ಯ, ವಿಶೇಷ ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರ, ಬೆಂಗಳೂರು ಇವರ ವಿರುದ್ಧ ದಾಖಲಾದ ಲಂಚ ಪ್ರಕರಣ ಬೆಂಗಳೂರು ನಗರ ವಿಭಾಗದ ಮೊಕದ್ದಮೆ ಸಂಖ್ಯೆ : 32/2010 ಬಗ್ಗೆ ಅಭಿಯೋಜನಾ ಮಂಜೂರಾತಿ–ಕುರಿತು–ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**

(1) ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ಇವರ ಪತ್ರ ಸಂಖ್ಯೆ : ಸಿಸಿಎ/(2)ಸಿಆರ್/27/2010–11 ದಿನಾಂಕ : 4–8–2010.

(2) ಸರ್ಕಾರದ ಆದೇಶ ಸಂಖ್ಯೆ : ಕಂಇ 43 ಎಡಿಇ 2001 ದಿನಾಂಕ : 9–8–2010

(3) ಹೆಚ್ಚುವರಿ ಪೋಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರ ಸಂಖ್ಯೆ : ಲೋಕ್/ಐಎನ್‌ವಿ(ಜಿ)/ಸಿಟಿ/ಕ್ರೈಂ. 32/2010 ದಿನಾಂಕ : 3/4–8–2010

(4) ಪೋಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ನಗರ ವಿಭಾಗ, ಬೆಂಗಳೂರು ನಗರ ಇವರ ಪತ್ರ ಸಂಖ್ಯೆ : ಲೋ. ಮೊ.ಸಂಖ್ಯೆ : 32/2010 ದಿನಾಂಕ : 3–8–2010.

(5) ಹೆಚ್ಚುವರಿ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರ ಸಂಖ್ಯೆ : ಲೋಕ್/ಐಎನ್‌ವಿ (ಜಿ)/ಸಿಟಿ/ಕ್ರೈಂ. 32/2010 ದಿನಾಂಕ : 16–09–2010.

(6) ತನಿಖಾಧಿಕಾರಿಯ ಅಂತಿಮ ತನಿಖಾ ವರದಿ ದಿನಾಂಕ : 16–09–2010.

(7) ತನಿಖಾ ದಾಖಲೆಗಳ ನಕಲುಗಳಾದ–ಪ್ರಥಮ ವರ್ತಮಾನ ವರದಿ, ಫಿರ್ಯಾದುದಾರರ ದೂರು, ಪಂಚರನ್ನು ಕಳುಹಿಸಿಕೊಡಲು ಕೋರಿ ಬರೆದ ಪತ್ರ ಪ್ರಾಯೋಗಿಕ ಪಂಚನಾಮೆ, ನೋಟುಗಳ ನಂಬರ್, ಟ್ರಾಪ್ ಪಂಚನಾಮೆ, ಸಂಭಾಷಣೆಯ ಲಿಪೀಕರಣದ ವಿವರ, ಆರೋಪಿತರ ಪ್ರತಿ ರಕ್ಷಣಾ ಹೇಳಿಕೆ, ಬಂಧನ ತಿಳುವಳಿಕೆ ಪತ್ರ ಸ್ವೀಕೃತಿ ಪತ್ರ, ಆರೋಪಿತರ ಹಿರಿಯ ಅಧಿಕಾರಿಯವರ ವರದಿ, ಅಮಾನತ್ತು, ಪಡಿಸಿದ ದಾಖಲೆಗಳು, ಸ್ವತ್ತು ಪಟ್ಟಿ, ಕೃತ್ಯ ನಡೆದ ಸ್ಥಳದ ನಕ್ಷೆ, ರಾಸಾಯನಿಕ ತಜ್ಞರ ವರದಿ, ಸೇವಾ ವಿವರ, ಸಾಕ್ಷಿದಾರರ ಹೇಳಿಕೆಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ : (1) ರ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ರವರ ದಿನಾಂಕ : 4–8–2010ರ ಪತ್ರದಲ್ಲಿ, ಶ್ರೀ ಹೆಚ್. ನಂಜಯ್ಯ, ವಿಶೇಷ ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರ, ಬೆಂಗಳೂರು ರವರು ದಿನಾಂಕ : 30–07–2010 ರಂದು ಮಧ್ಯಾಹ್ನ 12.00 ಗಂಟೆ ಸಮಯದಲ್ಲಿ ರೂ. 10,000/–ಗಳ ಲಂಚ ಹಣ ಸ್ವೀಕರಿಸುತ್ತಿದ್ದ ಸಮಯದಲ್ಲಿ ಮಾನ್ಯ ಲೋಕಾಯುಕ್ತರವರ ಬಲೆಗೆ ಸಿಕ್ಕಿ ಬಿದ್ದಿದ್ದು, ಇವರನ್ನು ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ ನಗರ ವಿಭಾಗ, ಬೆಂಗಳೂರು ರವರ ಬಂಧನ ತಿಳುವಳಿಕೆ ಪತ್ರ ದಿನಾಂಕ : 30–07–2010 ರಂತೆ ದಸ್ತಗಿರಿ ಮಾಡಿದ್ದು, ದಿನಾಂಕ : 30–07–2010 ರಿಂದ 7–8–2010 ರವರೆಗೆ ನ್ಯಾಯಾಂಗ ಬಂಧನದಲ್ಲಿರುತ್ತಾರೆ. ಈ ಹಿನ್ನೆಲೆಯಲ್ಲಿ, ಶ್ರೀ ಹೆಚ್. ನಂಜಯ್ಯ, ವಿಶೇಷ ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರ, ಬೆಂಗಳೂರು ಇವರನ್ನು ಕರ್ನಾಟಕ ಸಿವಿಲ್ ಸೇವಾ (ವ.ನಿ&ಮೇ) ನಿಯಮಗಳು 1957ರ ನಿಯಮ 10(2)(ಎ) ರಡಿಯಲ್ಲಿ ಅಮಾನತ್ತುಗೊಳಿಸುವಂತೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದರು.

ಮೇಲೆ ಓದಲಾದ ಕ್ರಮ ಸಂಖ್ಯೆ ; (2) ರ ಸರ್ಕಾರದ ದಿನಾಂಕ : 09–8–2010ರ ಆದೇಶದಲ್ಲಿ, ಶ್ರೀ ಹೆಚ್. ನಂಜಯ್ಯ, ವಿಶೇಷ ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರ, ಬೆಂಗಳೂರು ಇವರನ್ನು ದಿನಾಂಕ : 30–07–2010 ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (3) ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ದಿನಾಂಕ : 3/4–8–2010 ರ ಪತ್ರದಲ್ಲಿ, ಶ್ರೀ ಕೆ. ರವಿಶಂಕರ್, ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ನಗರ ಪೊಲೀಸ್ ಠಾಣೆ ರವರು ಆರೋಪಿ ಶ್ರೀ ಹೆಚ್. ನಂಜಯ್ಯ, ವಿಶೇಷ ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರ, ಬೆಂಗಳೂರು ಇವರ ವಿರುದ್ಧ ಲಂಚ ನಿರೋಧಕ ಕಾಯ್ದೆ 1988ರ ಕಲಂ 7,13(1)(ಡಿ) ಸಹವಾಚನ ಕಲಂ 13(2) ರೀತ್ಯ ದಿನಾಂಕ : 29–7–2010ರಂದು ಬೆಂಗಳೂರು ನಗರ ಲೋಕಾಯುಕ್ತ ಪೊಲೀಸ್ ಠಾಣೆಯ ಮೊಕದ್ದಮೆ ಸಂಖ್ಯೆ : 32/2010 ರಲ್ಲಿ ಪ್ರಕರಣವನ್ನು ದಾಖಲಿಸಿಕೊಂಡು, ತನಿಖೆಯನ್ನು ಕೈಗೊಂಡಿರುತ್ತಾರೆ. ಆರೋಪಿತ ನೌಕರರ ಮೇಲಿನ ಭ್ರಷ್ಟಾಚಾರದ ಆಪಾದನೆಗಳು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಆರೋಪಿ ಶ್ರೀ ಹೆಚ್. ನಂಜಯ್ಯ ವಿಶೇಷ ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರ, ಬೆಂಗಳೂರು ರವರು ತಮ್ಮ ಸ್ಥಾನದಲ್ಲಿಯೇ ಮುಂದುವರೆದರೆ, ತನಿಖೆಯ ಹಾದಿಯನ್ನು ತಪ್ಪಿಸುವ ಮತ್ತು ಸಾಕ್ಷ್ಯಾಧಾರಗಳನ್ನು ನಾಶಪಡಿಸುವ ಅವಕಾಶಗಳಿರುವುದರಿಂದ ಇವರನ್ನು ಸರ್ಕಾರಿ ಸೇವೆಯಿಂದ ತಕ್ಷಣದಿಂದಲೇ ಅಮಾನತ್ತಿನಲ್ಲಿಡಲು ಶಿಫಾರಸ್ಸು ಮಾಡುತ್ತಾ ಇವರ ಲೀನ್ (ಸ್ಥಾನ) ಕೂಡ ಬೇರೆ ಕಡೆಗೆ ವರ್ಗಾಯಿಸಲು ಕೋರಿರುತ್ತಾರೆ ಮತ್ತು ಮೇಲೆ ಓದಲಾದ ಕ್ರಮ ಸಂಖ್ಯೆ : (4) ರ ದಿನಾಂಕ : 3–8–2010ರ ಪತ್ರದಲ್ಲಿ ಕರ್ನಾಟಕ ಲೋಕಾಯುಕ್ತರವರು ಶ್ರೀ ಹೆಚ್. ನಂಜಯ್ಯ, ವಿಶೇಷ ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರ, ಬೆಂಗಳೂರು ಇವರ ಲೋಕಾಯುಕ್ತ ಪ್ರಕರಣವು ತನಿಖೆಯಲ್ಲಿದ್ದು, ಸದರಿಯವರ ಸೇವಾ ವಿವರಗಳನ್ನು ಕಳುಹಿಸುವಂತೆ ಕೋರಿದ್ದು, ಅದರಂತೆ ಸದರಿಯವರ ಸೇವಾ ವಿವರಗಳನ್ನು ಕರ್ನಾಟಕ ಲೋಕಾಯುಕ್ತಕ್ಕೆ ದಿನಾಂಕ : 23–09–2010ರಂದು ಕಳುಹಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (5) ರ ದಿನಾಂಕ : 16/20–09–2010ರ ಪತ್ರದಲ್ಲಿ, ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಶ್ರೀ ಹೆಚ್. ನಂಜಯ್ಯ, ವಿಶೇಷ ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು, ಬೆಂಗಳೂರು ಇವರ ವಿರುದ್ಧ ದಾಖಲಾದ ಲಂಚ ಪ್ರಕರಣದ ತನಿಖೆಯನ್ನು ಪೂರ್ಣಗೊಳಿಸಿದ ತನಿಕಾಧಿಕಾರಿಯ ದಿನಾಂಕ ; 11–08–2010ರ ಅಂತಿಮ ವರದಿಯ ಪ್ರಕಾರ, ಆರೋಪಿ ಶ್ರೀ ಹೆಚ್. ನಂಜಯ್ಯ, ವಿಶೇಷ ತಹಶೀಲ್ದಾರ್‌ರವರ ವಿರುದ್ಧ ದಾಖಲಾಗಿರುವ ಲಂಚ ಪ್ರಕರಣದಲ್ಲಿ, ಲಂಚ ನಿರೋಧ ಕಾಯ್ದೆ 1988ರ ಕಲಂ 7, 13(1)(ಡಿ) ಸಹವಾಚನ 13(2) ರಡಿಯಲ್ಲಿ ಆರೋಪಿತರ ಮೇಲಿನ ಆಪಾದನೆಗಳು ಸಾಬೀತಾಗಿರುವುದರಿಂದ, ಸದರಿ ಆರೋಪಿತರು ಸಕ್ಷಮ ನ್ಯಾಯಾಲಯದಲ್ಲಿ ಆಭಿಯೋಜನೆಗೊಳಪಡಲು ಅರ್ಹರಾಗಿದ್ದು, ಸದರಿಯವರನ್ನು ಅಭಿಯೋಜನೆಗೊಳಪಡಿಸಲು ಸಕ್ಷಮ ಪ್ರಾಧಿಕಾರದ ಅರ್ಥಾತ್ ಸದರಿ ಆರೋಪಿತರನ್ನು ತನ್ನ ಹುದ್ದೆಯಿಂದ ತೆಗೆದು ಹಾಕುವ/ವಜಾ ಮಾಡುವ ಅಧಿಕಾರವುಳ್ಳ ಪ್ರಾಧಿಕಾರದ ಪೂರ್ವಾನುಮತಿ ಅತ್ಯಗತ್ಯವಾಗಿರುತ್ತದೆ. ಆದ್ದರಿಂದ, ಆರೋಪಿ ಶ್ರೀ ಹೆಚ್. ನಂಜಯ್ಯರವರ ವಿರುದ್ಧ ಲಂಚ ನಿರೋಧ ಕಾಯ್ದೆ 1988ರ ಕಲಂ 7(13)(1)(ಡಿ) ಸಹವಾಚನ 13(2) ರಡಿಯಲ್ಲಿ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಜನೆಗೊಳಪಡಿಸಲು ಲಂಚ ನಿರೋಧ ಕಾಯ್ದೆ 1988ರ ಕಲಂ 19 ರನ್ವಯ ಮಂಜೂರಾತಿಯನ್ನು ನೀಡುವಂತೆ ಕೋರುತ್ತಾ, ಅಂತಿಮ ತನಿಖಾ ವರದಿ, ಪ್ರಥಮ ವರ್ತಮಾನ ವರದಿ, ಟ್ರಾಪ್ ಪೂರ್ವದ ಮತ್ತು ನಂತರದ ಮಹಜರ್‌ಗಳು, ರಾಸಾಯನಿಕ ತಜ್ಞರ ವರದಿ, ವಶಪಡಿಸಿಕೊಂಡ ದಾಖಲೆಗಳು, ಕೃತ್ಯ ನಡೆದ ಸ್ಥಳದ ನಕ್ಷೆ ಮತ್ತು ಸಾಕ್ಷಿಗಳ ಹೇಳಿಕೆಗಳನ್ನು ಸರ್ಕಾರದ ಅವಗಾಹನೆ ಹಾಗೂ ದಾಖಲೆಗಾಗಿ ಕಳುಹಿಸುತ್ತಾ, ಮೂರು ತಿಂಗಳ ಒಳಗಾಗಿ ಅಭಿಯೋಜನಾ ಮಂಜೂರಾತಿಯ ಆದೇಶವನ್ನು ಜಾರಿಗೊಳಿಸುವಂತೆ ತಿಳಿಸಿರುತ್ತಾರೆ.

ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಇವರು ತಮ್ಮ ಪತ್ರದೊಂದಿಗೆ ಕಳುಹಿಸಿಕೊಟ್ಟ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ :

(1) ಅಂತಿಮ ತನಿಖಾ ವರದಿ ದಿನಾಂಕ : 16/20–09–2010.

(2) ಪ್ರಥಮ ವರ್ತಮಾನ ವರದಿ ಮತ್ತು ದೂರಿನ ಜೆರಾಕ್ಸ್ ಪ್ರತಿಗಳು

(3) ಪಂಚರನ್ನು ಕಳುಹಿಸಿಕೊಡಲು ಕೋರಿ ಬರೆದ ಪತ್ರ

(4) ಪ್ರಾಯೋಗಿಕ ಪಂಚನಾಮೆ

(5) ಫಿರ್ಯಾದುದಾರರು ದೂರು ನೀಡಿದ ಸಮಯದಲ್ಲಿ ಹಾಜರುಪಡಿಸಿದ ಸಿ.ಡಿ. ದಿ : 18–06–2010ರ ಸಂಭಾಷಣೆ ವಿವರ

(6) ನೋಟುಗಳ ನಂಬರ್

(7) ಟ್ರಾಪ್ ಪಂಚನಾಮೆ

(8) ಟ್ರಾಪ್ ಆದ ಸಮಯದಲ್ಲಿ ಆರೋಪಿತರ ಮತ್ತು ಫಿರ್ಯಾದಿಯ ನಡುವೆ ನಡೆದಿರುವ ಸಂಭಾಷಣೆಯ ಲಿಪೀಕರಣದ ವಿವರ
(9) ಆರೋಪಿತರ ಪ್ರತಿ ರಕ್ಷಣಾ ಹೇಳಿಕೆ
(10) ಬಂಧನ ತಿಳುವಳಿಕೆ ಪತ್ರ
(11) ಸ್ವೀಕೃತಿ ಪತ್ರ
(12) ಆರೋಪಿತರ ಹಿರಿಯ ಅಧಿಕಾರಿಯವರ ವರದಿ
(13) ಅಮಾನತ್ತು ಪಡಿಸಿದ ದಾಖಲೆಗಳು
(14) ಸ್ವತ್ತು ಪಟ್ಟಿ
(15) ಕೃತ್ಯ ನಡೆದ ಸ್ಥಳದ ನಕ್ಷೆ
(16) ರಾಸಾಯನಿಕ ತಜ್ಞರ ವರದಿ
(17) ಸೇವಾ ವಿವರ
(18) ಸಾಕ್ಷಿದಾರರ ಹೇಳಿಕೆಗಳು

ಲೋಕಾಯುಕ್ತರ ಕಛೇರಿಯ ಪತ್ರ ಹಾಗೂ ದಾಖಲೆಗಳನ್ನು ಪರಿಶೀಲಿಸಲಾಗಿ, ಶ್ರೀ ನಾರಾಯಣ ರೆಡ್ಡಿ ಎಂಬುವವರಿಗೆ ಸಂಬಂಧಿಸಿದ ತೊಬರಹಳ್ಳಿ ಗ್ರಾಮ ಸರ್ವೆ ನಂ 42/1ರಲ್ಲಿ 01 ಎಕರೆ 06 ಗುಂಟೆ ಜಮೀನಿನ ಖಾತೆಯನ್ನು ಮಾಡಿಕೊಡಲು ಫಿರ್ಯಾದುದಾರರಿಗೆ 20 ಸಾವಿರ ರೂಪಾಯಿಗಳ ಲಂಚದ ಹಣಕ್ಕಾಗಿ ಒತ್ತಾಯಿಸಿ ದಿ : 29–07–2010 ರಂದು ಮುಂಗಡ 10 ಸಾವಿರ ರೂಪಾಯಿಗಳನ್ನು ಖಾಸಗಿ ವ್ಯಕ್ತಿ ರಮೇಶ್‌ರವರ ಮೂಲಕ ಪಡೆದು ಉಳಿದ 10 ಸಾವಿರ ರೂಪಾಯಿಗಳನ್ನು ಅಟೆಂಡರ್ ವೆಂಕಟರಮಣಪ್ಪರವರಿಂದ ಶ್ರೀ ನಂಜಯ್ಯ, ಹಿಂದಿನ ವಿಶೇಷ ತಹಶೀಲ್ದಾರ್, ಕೆ. ಆರ್. ಪುರಂ, ಬೆಂಗಳೂರು ಪೂರ್ವ ತಾಲ್ಲೂಕು ಇವರು ಪಡೆದಿರುತ್ತಾರೆ. ತನಿಖೆಯು ಪೂರ್ಣಗೊಂಡಿದ್ದು, ಆರೋಪಿತರ ಮೇಲಿನ ಆಪಾದನೆಗಳು ಸಾಬೀತಾಗಿದ್ದು, ಅವರು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಪಡಲು ಅರ್ಹರಾಗಿರುವುದರಿಂದ ಈ ಕೆಳಕಂಡ ತನಿಖೆಯಿಂದ ಕಂಡು ಬಂದ ಅಂಶಗಳ ಹಿನ್ನೆಲೆಯಲ್ಲಿ, ಅವರನ್ನು ಅಭಿಯೋಜನೆಗೊಳಿಸಲು ಸಕ್ಷಮ ಪ್ರಾಧಿಕಾರದ ಮಂಜೂರಾತಿ ನೀಡುವಂತೆ ಲೋಕಾಯುಕ್ತದ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಕೋರಿರುತ್ತಾರೆ.

1. ಫಿರ್ಯಾದುದಾರರ ಸ್ನೇಹಿತರಾದ ಶ್ರೀ ನಾರಾಯಣರೆಡ್ಡಿಯವರು ತೊಬರಹಳ್ಳಿ ಗ್ರಾಮದ ತನ್ನ ಜಮೀನು ಸರ್ವೆ ನಂ. 42/1ರ ಖಾತೆ ಮಾಡಿಸಿಕೊಳ್ಳಲು ದಿ : 26–04–2010ರಂದು ಬೆಂಗಳೂರು ನಗರ ಪೂರ್ವ ತಾಲ್ಲೂಕು ಕಛೇರಿಯಲ್ಲಿ ಅರ್ಜಿ ನೀಡಿ, ಸ್ವೀಕೃತಿ ಪಡೆದುಕೊಂಡಿರುತ್ತಾರೆ. ಸದರಿಯವರು ತಹಶೀಲ್ದಾರ್ ಕಛೇರಿಗೆ ಹೋಗಿದ್ದು ತಡವಾಗಿದ್ದರಿಂದ ಆತನಿಗೆ ಆರೋಗ್ಯ ಸರಿಯಿಲ್ಲದ ಕಾರಣ ಈ ಕೆಲಸವನ್ನು ಫಿರ್ಯಾದುದಾರರಿಗೆ ವಹಿಸಿಕೊಟ್ಟಿರುತ್ತಾರೆ.
2. ಫಿರ್ಯಾದುದಾರರು, ಮೇ, ತಿಂಗಳಿನಲ್ಲಿ, ಮತ್ತೆ 2–3 ವಾರಗಳ ನಂತರ ಒಂದು ಬಾರಿ ಈ ಕೆಲಸಕ್ಕಾಗಿ ತಾಲ್ಲೂಕು ಕಛೇರಿಗೆ ಭೇಟಿ ಕೊಟ್ಟು, ದಿ : 21–07–2010 ರಂದು ಭೇಟಿ ಕೊಟ್ಟು ಸದರಿ ಕಡತವು ಆರೋಪಿತರ ಬಳಿ ಇರುವುದನ್ನು ಖಚಿತಪಡಿಸಿಕೊಂಡು, ಅವರನ್ನು ಭೇಟಿ ಮಾಡಲಾಗಿ 2–3 ದಿನಗಳ ನಂತರ ಬರುವಂತೆ ಆರೋಪಿತರು ತಿಳಿಸಿರುತ್ತಾರೆ. ಅದರಂತೆ ದಿ : 26–07–2010ರಂದು ಪುನಃ ಆರೋಪಿತರನ್ನು ಭೇಟಿ ಮಾಡಲಾಗಿ ಖಾಸಗಿ ವ್ಯಕ್ತಿ ರಮೇಶ್‌ರವರನ್ನು ಪರಿಚಯಿಸಿ, ಖಾತಾ ಬದಲಾವಣೆಗಾಗಿ ರೂ. 25,000/–ಗಳ ಲಂಚದ ಹಣಕ್ಕಾಗಿ ಬೇಡಿಕೆ ಇಟ್ಟು ರೂ. 20,000/– ಗಳನ್ನಾದರೂ ಕೊಡುವಂತೆ ಒತ್ತಾಯಪಡಿಸಿರುತ್ತಾರೆ.
3. ದಿ : 28–07–2010 ರಂದು ಫಿರ್ಯಾದುದಾರರು ಆರೋಪಿತರನ್ನು ಭೇಟಿ ಮಾಡಿದಾಗ ಲಂಚದ ಹಣ ನೀಡದೇ ಕೆಲಸ ಮಾಡಲಾಗುವುದಿಲ್ಲವೆಂದು ಆರೋಪಿತರು ಗದರಿ ಕಳುಹಿಸಿರುತ್ತಾರೆ. ದಿ : 29–07–2010ರಂದು ಫಿರ್ಯಾದುದಾರರು ಆರೋಪಿತರನ್ನು ಭೇಟಿ ಮಾಡಿದಾಗ ರಮೇಶ್‌ರವರಿಗೆ ಕೊಡಲು ತಿಳಿಸಿದ್ದು, ಒಟ್ಟು ಲಂಚ ಬೇಡಿಕೆಯಲ್ಲಿ ಅರ್ಧ ಮೊತ್ತವಾದ ರೂ. 10,000/–ಗಳನ್ನು ಫಿರ್ಯಾದುದಾರರು ಆರೋಪಿತರ ಸೂಚನೆಯಂತೆ ಖಾಸಗಿ ವ್ಯಕ್ತಿ ರಮೇಶನ ಕೈಗೆ ನೀಡಿ, ಈ ಇಬ್ಬರ ನಡುವಿನ ಸಂಭಾಷಣೆಯನ್ನು ಮೊಬೈಲ್‌ನಲ್ಲಿ ರೆಕಾರ್ಡ್ ಮಾಡಿಕೊಂಡಿರುತ್ತಾರೆ.
4. ದಿ : 30–07–2010ರಂದು ಟ್ರ್ಯಾಪ್ ಸಮಯದಲ್ಲಿ ಆರೋಪಿತರು ಫಿರ್ಯಾದುದಾರರೊಂದಿಗೆ ಬಾಕಿ ಕೆಲಸದ ಬಗ್ಗೆ ಮಾತನಾಡಿ, ದಿ : 29–07–10 ರಂದು ರೂ. 10,000/–ಗಳ ಲಂಚದ ಹಣವನ್ನು ಖಾಸಗಿ ವ್ಯಕ್ತಿ ರಮೇಶ್‌ರವರಿಗೆ ನೀಡಿದ್ದನ್ನು ಖಾತರಿ ಪಡಿಸಿಕೊಂಡು, ಬಾಕಿ ಉಳಿದ ಲಂಚದ ಹಣ ರೂ. 10,000/–ಗಳನ್ನು ತಾನು ನೇರವಾಗಿ ಪಡೆಯದೇ ತನ್ನ ಕಛೇರಿಯ ಜವಾನ ಶ್ರೀ ವೆಂಕಟರಮಣಪ್ಪರವರನ್ನು ಕರೆಸಿ ಅವರಿಗೆ ಕೊಡಲು ಸೂಚಿಸಿರುತ್ತಾರೆ.
5. ವೆಂಕಟರಮಣಪ್ಪರವರ ವಿಚಾರಣೆಯಿಂದ ತಾನು ಆರೋಪಿತರ ಸೂಚನೆಯಂತೆ ಫಿರ್ಯಾದಿಯವರಿಂದ ರೂ. 10,000/– ಹಣ ಪಡೆದು ಅವರು ತಿಳಿಸಿದಂತೆ ಹೋದಾಗ ಆರೋಪಿತರು ಆ್ಯಂಟೀ ಛೇಂಬರ್‌ನಲ್ಲಿರುವ ಟೇಬಲ್ ಡ್ರಾನಲ್ಲಿಟ್ಟಿರುವುದಾಗಿ ತಿಳಿಸಿದ್ದು, ಅದರಂತೆ ಪಂಚರ ಸಮಕ್ಷಮ ಅಮಾನತ್ತುಪಡಿಸಿರುತ್ತದೆ. ಅದರಂತೆ ಹಸ್ತ ಶುದ್ಧೀಕರಣದಿಂದಲೂ, ಆರೋಪಿತರ ಆ್ಯಂಟೀ ಛೇಂಬರ್‌ನಲ್ಲಿ ದೊರೆತ ಲಂಚದ ಹಣದಿಂದಲೂ ವೆಂಕಟರಮಣಪ್ಪ ಹಾಗೂ ಖಾಸಗಿ ವ್ಯಕ್ತಿ ರಮೇಶ್‌ರವರ ಹೇಳಿಕೆಗಳಿಂದ ಫಿರ್ಯಾದಿಯವರಿಂದ ಲಂಚದ ಹಣಕ್ಕಾಗಿ ಒತ್ತಾಯ ಮಾಡಿ ಪಡೆದಿರುವುದು ದೃಢಪಡುತ್ತದೆ.
6. ಫಿರ್ಯಾದುದಾರರ ಬಾಕಿ ಕೆಲಸದ ಕಡತವು ಟ್ರ್ಯಾಪ್ ಸಮಯದಲ್ಲಿ ಆರೋಪಿತರ ಟೇಬಲ್‌ನಲ್ಲಿ ದೊರೆತಿದ್ದು ದಿ : 29–07–2010 ರಂದು ಲಂಚದ ಹಣ ರೂ. 10,000/– ಗಳನ್ನು ಫಿರ್ಯಾದುದಾರರಿಂದ ರಮೇಶ್ ರವರ ಮುಖೇನ ಸ್ವೀಕರಿಸಿದ ನಂತರ ಸದರಿ ಕಡತದಲ್ಲಿ ಆರೋಪಿತರು ದಿ : 29–07–10 ರಂದೇ ಅನುಮೋದಿಸಿದೆ ಎಂದು ಬರೆದು ಸಹಿ ಮಾಡಿರುವುದು ದೃಢಪಡುತ್ತದೆ.
7. ತಹಶೀಲ್ದಾರ್‌ರವರ ವರದಿಯನ್ವಯ ಫಿರ್ಯಾದುದಾರರ ಬಾಕಿ ಕೆಲಸವು ಆರೋಪಿತರ ವ್ಯಾಪ್ತಿಗೆ ಒಳಪಡುವುದಾಗಿಯು ಲಂಚದ ಹಣ ಸ್ವೀಕರಿಸಲಾದ ದಿ : 29–07–10 ಮತ್ತು ದಿ : 30–07–10ರಂದು ಆರೋಪಿತರು ಹಾಗೂ ವೆಂಕಟರಮಣಪ್ಪನವರು ಕಛೇರಿಯಲ್ಲಿ ಹಾಜರಿದ್ದಾಗಿಯು ಫಿರ್ಯಾದುದಾರರ ಕೆಲಸದಲ್ಲಿ ವಿಳಂಬ ಮಾಡಿರುವುದಾಗಿ ವರದಿ ನೀಡಿರುತ್ತಾರೆ.
8. ಆರೋಪಿತರು ತನ್ನ ಕಛೇರಿಯ ಕೆಲಸ ಕಾರ್ಯಗಳನ್ನು ಖಾಸಗಿ ವ್ಯಕ್ತಿ ರಮೇಶ್‌ರವರ ಮುಖಾಂತರ ವ್ಯವಹಾರಗಳನ್ನು ಮಾಡಿಸಿಕೊಂಡು ಏಜಂಟ್ ಆಗಿ ಉಪಯೋಗಿಸಿಕೊಂಡು ಅವರ ಮುಖಾಂತರ ಲಂಚದ ಹಣವನ್ನು ಪಡೆದು ಅಧಿಕಾರವನ್ನು ದುರುಪಯೋಗಪಡಿಸಿಕೊಂಡಿರುತ್ತಾರೆ.

9. ಪ್ರಕರಣದ ತನಿಖಾ ಕಾಲದಲ್ಲಿ ಎ–2 ಆರೋಪಿ ರಮೇಶ್‌ರವರು ಎ–1 ನಂಜಯ್ಯ ರವರು ತಿಳಿಸಿದಂತೆ ಲಂಚದ ಹಣವನ್ನು ಪಡೆದಿದ್ದಾಗಿ ಅದೇ ದಿನ ಸಂಜೆ ಆರೋಪಿ ನಂಜಯ್ಯರವರಿಗೆ ನೀಡಿರುವುದಾಗಿ ಕಂಡುಬಂದಿದ್ದು, ಸದರಿ ರಮೇಶ್‌ರವರು ತನಿಖೆಗೆ ಅನುಗುಣವಾಗಿ ಹೇಳಿಕೆ ನೀಡಿರುವುದರಿಂದ ಇವರನ್ನು ಸಾಕ್ಷಿದಾರರಾಗಿ ಪರಿಗಣಿಸಿರುತ್ತೆ.
10. ಫಿರ್ಯಾದುದಾರರಿಗೆ ನೀಡಲಾಗಿದ್ದ ಬಟನ್ ಕ್ಯಾಮೆರಾದಲ್ಲಿ ಸೆರೆಹಿಡಿದಿದ್ದ ದೃಶ್ಯ ಮತ್ತು ಧ್ವನಿ ವೀಕ್ಷಣೆಯಿಂದ ಮತ್ತು ಶಿರಸ್ತೇದಾರರ ದೃಶ್ಯ ಮತ್ತು ಧ್ವನಿ ದೃಢೀಕರಣದಿಂದ ಆರೋಪಿತರ ಲಂಚದ ಹಣಕ್ಕಾಗಿ ಒತ್ತಾಯಿಸಿರುವುದು ಹಾಗೂ ವೆಂಕಟರಮಣಪ್ಪರವರ ಮುಖಾಂತರ ಲಂಚದ ಹಣವನ್ನು ಸ್ವೀಕರಿಸಿರುವುದು ದೃಢಪಟ್ಟಿರುತ್ತದೆ.

ತನಿಖಾ ವರದಿಯಲ್ಲಿ ದೃಢಪಟ್ಟಿರುವ ಅಂಶಗಳನ್ನು ಹಾಗೂ ದಾಖಲೆಗಳನ್ನು ಪರಿಶೀಲಿಸಲಾಗಿ ಶ್ರೀ ನಾರಾಯಣರೆಡ್ಡಿರವರಿಗೆ ಸಂಬಂಧಿಸಿದ ತೊಬರಹಳ್ಳಿ ಗ್ರಾಮ ಸರ್ವೆ ನಂ. 42/1 ರಲ್ಲಿನ 1 ಎಕರೆ 6 ಗುಂಟೆ ಜಮೀನಿನ ಖಾತೆಯನ್ನು ಮಾಡಿಕೊಡಲು ಫಿರ್ಯಾದುದಾರರಿಗೆ 20,000 ರೂ.ಗಳ ಲಂಚದ ಹಣಕ್ಕಾಗಿ ಒತ್ತಾಯಿಸಿ ದಿ ; 29–07–10 ರಂದು ಮುಂಗಡ ಹಣ 10,000 ರೂ.ಗಳನ್ನು ಖಾಸಗಿ ವ್ಯಕ್ತಿ ರಮೇಶ್ ರವರ ಮೂಲಕ ಪಡೆದು ಉಳಿದ 10,000 ರೂ. ಗಳ ಹಣವನ್ನು ಟ್ರ್ಯಾಪ್ ಸಮಯದಲ್ಲಿ ಪ್ಯೂನ್ ವೆಂಕಟರಮಣಪ್ಪರವರಿಂದ ಪಡೆದಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಶ್ರೀ ಹೆಚ್. ನಂಜಯ್ಯ, ತಹಶೀಲ್ದಾರ್, ಇವರು ಒಬ್ಬ ಜವಾಬ್ದಾರಿಯುತ ಸರ್ಕಾರಿ ನೌಕರರಾಗಿದ್ದು, ಸರ್ಕಾರಿ ಕೆಲಸ ಮಾಡಲು ಲಂಚದ ಹಣವನ್ನು ಅಪೇಕ್ಷಿಸಿ ಖಾಸಗಿ ವ್ಯಕ್ತಿಯನ್ನು ಇಟ್ಟುಕೊಂಡು ನ್ಯಾಯಯುತ ಕೆಲಸವನ್ನು ಮಾಡಲು ಲಂಚದ ಹಣವನ್ನು ಪಡೆದು ತಮ್ಮ ಅಧಿಕಾರವನ್ನು ದುರುಪಯೋಗ ಪಡಿಸಿಕೊಂಡು ದುರ್ನಡತೆ ಎಸಗಿರುವುದು ಸಾಬೀತಾಗಿರುವುದರಿಂದ ಲಂಚ ನಿರೋಧ ಕಾಯ್ದೆ 1988ರ ಕಲಂ 7, 13(1)(ಡಿ) ಹಾಗೂ 13(2) ರನ್ವಯ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸಲು ಮಂಜೂರಾತಿಯನ್ನು ನೀಡಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಕಂಇ 43 ಎಡಿಇ 2010, ಬೆಂಗಳೂರು, ದಿನಾಂಕ : 12–11–2010**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆರೋಪಿಯಾದ ಶ್ರೀ ನಂಜಯ್ಯ, ಹಿಂದಿನ ವಿಶೇಷ ತಹಶೀಲ್ದಾರ್, ಕೆ.ಆರ್. ಪುರಂ, ಬೆಂಗಳೂರು ಪೂರ್ವ ತಾಲ್ಲೂಕು ಪ್ರಸ್ತುತ ಅಮಾನತ್ತಿನಲ್ಲಿರುವ ಇವರನ್ನು ಹುದ್ದೆಯಿಂದ ತೆಗೆದುಹಾಕುವ ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಇವರನ್ನು ಲಂಚ ನಿರೋಧ ಕಾಯ್ದೆ 1988ರ ಕಲಂ 7(13)(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2)ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಲಂಚ ನಿರೋಧ ಕಾಯ್ದೆ 1988ರ ಕಲಂ 19 ರನ್ವಯ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸಲು ಸರ್ಕಾರವು ಮಂಜೂರಾತಿ ನೀಡಿ ಆದೇಶಿಸಿದೆ.

ಮುಂದುವರೆದು, ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿ 1977ರ ನಿಯಮ 18 ರ ಪ್ರಕಾರ ಸರ್ಕಾರದ ಪರವಾಗಿ ಅಥವಾ ಸರ್ಕಾರದಿಂದ ಹೊರಡಿಸಲಾದ ಎಲ್ಲಾ ಆದೇಶಗಳನ್ನು ಅಥವಾ ಲೇಖನಗಳನ್ನು ಕರ್ನಾಟಕ ಸರ್ಕಾರದ ರಾಜ್ಯಪಾಲರ ಹೆಸರಿನಲ್ಲಿ ಹೊರಡಿಸಬೇಕು ಅಥವಾ ಹೊರಡಿಸುವಂತೆ ಮಾಡಬೇಕು.

ಅದೇ ನಿಯಮಾವಳಿಯ ನಿಯಮ 19(1)ರ ಪ್ರಕಾರ ಕರ್ನಾಟಕ ಸರ್ಕಾರದ ರಾಜ್ಯಪಾಲರ ಹೆಸರಿನಲ್ಲಿ ಹೊರಡಿಸಿದ ಆದೇಶಗಳು ಮತ್ತು ಲೇಖನಗಳು ಒಬ್ಬ ಅಧೀನ ಕಾರ್ಯದರ್ಶಿಯ ಸಹಿಯಿಂದ ಅಧಿಕೃತಗೊಳ್ಳಬೇಕು ಹಾಗೂ ಅಂತಹ ಸಹಿಯು ಅಂತಹ ಆದೇಶ ಅಥವಾ ಲೇಖನವನ್ನು ಸರಿಯಾಗಿ ಅಧಿಕೃತಗೊಳಿಸುತ್ತದೆ.

ಆದ್ದರಿಂದ ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿ 1977ರ ಈ ಮೇಲ್ಕಂಡ ಆದೇಶವನ್ನು ದಿನಾಂಕ : 12–11–2010 ರಂದು ಹೊರಡಿಸಲಾಗಿದೆ.

\

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

ಪಿ. ಆರ್. 2850

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಹಾಸನದ ಪಶುವೈದ್ಯಕೀಯ ಕಾಲೇಜಿಗೆ ರೇಷ್ಮೆ ತರಬೇತಿ ಸಂಸ್ಥೆಯ ಕಟ್ಟಡವನ್ನು ತಾತ್ಕಾಲಿಕವಾಗಿ ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ವಾಕೈ 10 ರೇಯೋವಿ 2007, ದಿ : 27–07–2007
2. ಕುಲಪತಿಗಳು, ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ ಇವರ ಪತ್ರ ಸಂಖ್ಯೆ : ಕು/ಕಪಪಮೀವಿವಿ/2007–ಪಿಎಸ್–198/1311, ದಿನಾಂಕ : 1–8–2007
3. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ : ಪಸಂಮೀ 32 ಪಅಸೇ 2007 ದಿನಾಂಕ : 30–04–2010.
4. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಪತ್ರ ಸಂಖ್ಯೆ : ರೇನಿ/ತಾಂ2/ಹಾ.ಕ.ತ./08/2007–08, ದಿನಾಂಕ : 26–7–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಸಂಖ್ಯೆಯ (1)ರ ಆದೇಶದಲ್ಲಿ ಹಾಸನ ನಗರಕ್ಕೆ ಮಂಜೂರಾಗಿರುವ ಪಶುವೈದ್ಯಕೀಯ ಕಾಲೇಜನ್ನು ನಡೆಸುವುದಕ್ಕಾಗಿ ತುರ್ತಾಗಿ ಕಟ್ಟಡದ ಅಗತ್ಯವಿದ್ದ ಹಿನ್ನೆಲೆಯಲ್ಲಿ ರೇಷ್ಮೆ ತರಬೇತಿ ಸಂಸ್ಥೆ, ಹಾಸನ ಇಲ್ಲಿಯ ಸ್ಥಳವನ್ನು ಎರಡು ವರ್ಷದ ಅವಧಿಗೆ ಪಶುವೈದ್ಯಕೀಯ ಕಾಲೇಜನ್ನು ನಡೆಸಲು ತಾತ್ಕಾಲಿಕವಾಗಿ ಪಶುಸಂಗೋಪನೆ ಮತ್ತು ಪಶುವೈದ್ಯ ಇಲಾಖೆಗೆ ನೀಡಲಾಗಿತ್ತು. ಮೇಲೆ ಓದಲಾದ ಕ್ರಮಸಂಖ್ಯೆ (2)ರ ಪತ್ರದಲ್ಲಿ ಕುಲಪತಿಗಳು, ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ ಇವರು ಭಾರತೀಯ ಪಶುವೈದ್ಯಕೀಯ ಪರಿಷತ್ತು ನಿಗಧಿಪಡಿಸಿರುವ ಮೂಲಭೂತ ಸೌಕರ್ಯಗಳನ್ನು ಪಶುವೈದ್ಯಕೀಯ ಮಹಾವಿದ್ಯಾಲಯ, ಹಾಸನಕ್ಕೆ ನೀಡಿ ಅವರಿಂದ ಮಾನ್ಯತೆ ಪಡೆಯಬೇಕಾಗಿದ್ದು, ಅವರ ಶಿಫಾರಸ್ಸಿನ ಮೇರೆಗೆ ಎಲ್ಲಾ ಸವಲತ್ತುಗಳನ್ನು ಒದಗಿಸಬೇಕಾಗಿರುತ್ತದೆ. ಆದ್ದರಿಂದ ಹಾಸನದ ರೇಷ್ಮೆ ತರಬೇತಿ ಕೇಂದ್ರ ಎಲ್ಲಾ 25 ಕಟ್ಟಡಗಳನ್ನು ಪಶುವೈದ್ಯಕೀಯ ಮಹಾವಿದ್ಯಾಲಯಕ್ಕೆ ಹಸ್ತಾಂತರಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮಸಂಖ್ಯೆ (3)ರ ಪತ್ರದಲ್ಲಿ ಪ್ರಸ್ತುತ ರೇಷ್ಮೆ ಇಲಾಖೆಗೆ ಸೇರಿದ 17 ಕಟ್ಟಡಗಳನ್ನು ಹಾಸನ ಪಶುವೈದ್ಯಕೀಯ ವಿಶ್ವವಿದ್ಯಾಲಯವು ಉಪಯೋಗಿಸುತ್ತಿದ್ದು, ಮುಂದಿನ ಶೈಕ್ಷಣಿಕ ವರ್ಷದಲ್ಲಿ 4ನೇ ವರ್ಷದ ತರಬೇತಿ ಪ್ರಾರಂಭವಾಗುತ್ತಿದ್ದು, ಅವರಿಗೆ ಸೂಕ್ತ ವಸತಿ ಪ್ರಯೋಗಾಲಯ ಇತ್ಯಾದಿ ಸೌಲಭ್ಯಗಳನ್ನು ಕಲ್ಪಿಸಬೇಕಾಗಿರುವ ಹಿನ್ನೆಲೆಯಲ್ಲಿ ರೇಷ್ಮೆ ತರಬೇತಿ ಕೇಂದ್ರದ ಈ ಕೆಳಗಿನ ಕಟ್ಟಡಗಳನ್ನು ತಾತ್ಕಾಲಿಕವಾಗಿ

ಪಶುವೈದ್ಯಕೀಯ ವಿದ್ಯಾಲಯಕ್ಕೆ ಹಸ್ತಾಂತರಿಸುವಂತೆ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ ಇವರು ಕೋರಿರುತ್ತಾರೆ.

1. ಆಡಳಿತ ಕಚೇರಿ
2. ಸಿ.ಆರ್.ಸಿ. ಕಟ್ಟಡ
3. ವಾರ್ಡನ್‌ರವರ ವಸತಿ ಗೃಹ
4. ರೇಷ್ಮೆ ಸಹಾಯಕರ ವಸತಿ ಗೃಹಗಳು–4
5. ಟೆನಮೆಂಟಲ್ ವಸತಿ ಗೃಹಗಳು–8

ಈ ಹಿನ್ನೆಲೆಯಲ್ಲಿ ಈ ಬಗ್ಗೆ ರೇಷ್ಮೆ ಆಯುಕ್ತರಿಂದ ಅಭಿಪ್ರಾಯ ಕೋರಲಾಗಿದ್ದು, ರೇಷ್ಮೆ ಆಯುಕ್ತರು ಸದರಿ ತರಬೇತಿ ಸಂಸ್ಥೆಯ ಎಲ್ಲಾ ಕಟ್ಟಡಗಳನ್ನು ಹಸ್ತಾಂತರಿಸುವುದು ಇಲಾಖೆಯ ಹಿತದೃಷ್ಟಿಯಿಂದ ಸೂಕ್ತವಲ್ಲವೆಂದು ತಿಳಿಸಿದ್ದ ಹಿನ್ನೆಲೆಯಲ್ಲಿ ವಿಷಯವನ್ನು ಮರು ಪರಿಶೀಲಿಸಿದ್ದು, ಪಶುವೈದ್ಯಕೀಯ ಮಹಾವಿದ್ಯಾಲಯದ ಶೈಕ್ಷಣಿಕ ಅಗತ್ಯಗಳ ಹಿತದೃಷ್ಟಿಯಿಂದ ರೇಷ್ಮೆ ತರಬೇತಿ ಸಂಸ್ಥೆಯ ಕೆಲವು ಕಟ್ಟಡಗಳನ್ನು ಹಾಸನ ಪಶುವೈದ್ಯಕೀಯ ವಿದ್ಯಾಲಯಕ್ಕೆ ಹಸ್ತಾಂತರಿಸಲು ತೀರ್ಮಾನಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ವಾಕೈ 10 ರೇಯೋವಿ 2007, ಬೆಂಗಳೂರು, ದಿನಾಂಕ : 18–11–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ರೇಷ್ಮೆ ಇಲಾಖೆಯ ಹಾಸನದ ರೇಷ್ಮೆ ತರಬೇತಿ ಸಂಸ್ಥೆಯ ರೇಷ್ಮೆ ಸಹಾಯಕರ 4 ವಸತಿ ಗೃಹಗಳನ್ನು ಹಾಗೂ ಟೆನಮೆಂಟಲ್‌ನ 8 ವಸತಿ ಗೃಹಗಳನ್ನು ತಾತ್ಕಾಲಿಕವಾಗಿ 2 ವರ್ಷಗಳ ಅವಧಿಗೆ ಮಾತ್ರ ಹಾಸನ ಪಶುವೈದ್ಯಕೀಯ ವಿಶ್ವವಿದ್ಯಾಲಯಕ್ಕೆ ನೀಡಲು ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಭಾರತಿ ಆರ್. ನಾಯಕ್**
ಪೀಠಾಧಿಕಾರಿ (ರೇಷ್ಮೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ. ಆರ್. 2851

## ಕನ್ನಡ ಮತ್ತು ಸಂಸ್ಕೃತಿ ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಇಲಾಖೆಗೆ ಪೀಠೋಪಕರಣಗಳನ್ನು ಸರಬರಾಜು ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 4 ಡಿಎಸ್‌ವೈ 2010 ದಿ : 19–08–2010
2. ಕ.ಸಂ.ವಾ. ಇಲಾಖೆಯ ಕಾರ್ಯದರ್ಶಿಯವರ ಆಪ್ತ ಶಾಖೆಯ ದಿ : 21–10–2010ರ ಮನವಿ.
3. ದಿ : 27–10–2010ರ ಸರ್ಕಾರದ ಪತ್ರ : ಕಸಂವಾಪ್ರ 115 ಸ್ವೀಮರ 2010
4. ದಿ : 29–10–2010ರ ಧನಲಕ್ಷ್ಮೀ ಎಂಟರ್‌ಪ್ರೈಸಸ್‌ರವರ ಪತ್ರ ಸಂಖ್ಯೆ : ಡಿಇ/ಫರ್/8/2010–11.

**ಪ್ರಸ್ತಾವನೆ :**

ಮೇಲೆ ಓದಲಾದ (2)ರ ಮನವಿಯಲ್ಲಿ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಗಳು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಇಲಾಖೆಯ ಕಾರ್ಯದರ್ಶಿಯವರ ಉಪಯೋಗಕ್ಕಾಗಿ ಮೂರು ಸೀಟ್‌ಗಳುಳ್ಳ ಒಂದು ಸೋಫಾ ಹಾಗೂ ಒಂದೊಂದು ಸೀಟ್‌ಗಳ ಎರಡು ಸೋಫಾ ಸೆಟ್‌ಗಳನ್ನು ಖರೀದಿಸುವ ಸಲುವಾಗಿ ಮನವಿ ಸಲ್ಲಿಸಿದ್ದರು.

ಕನ್ನಡ ಮತ್ತು ಸಂಸ್ಕೃತಿ ವಾರ್ತಾ ಇಲಾಖೆಯ ಕಾರ್ಯದರ್ಶಿಯವರಿಗೆ ಅಗತ್ಯವಾಗಿ ಬೇಕಾಗಿರುವ ಸೋಫಾ ಸೆಟ್‌ಗಳನ್ನು ಖರೀದಿಸಲು ಮೇಲೆ ಓದಲಾದ (3)ರ ಪತ್ರದಲ್ಲಿ 03 ಕಂಪನಿಗಳಿಗೆ ಪತ್ರ ಬರೆದು ದರಪಟ್ಟಿ ನೀಡುವಂತೆ ಕೋರಲಾಗಿತ್ತು. ಹಾಗೂ ಅದರಂತೆ 03 ಕಂಪನಿಗಳಿಂದ ಸ್ವೀಕೃತವಾದ ದರಪಟ್ಟಿಯನ್ವಯ ಸೋಫಾ ಸೆಟ್‌ಗಳ ದರಪಟ್ಟಿಯು ಈ ಕೆಳಗಿನಂತಿರುತ್ತದೆ. ಹಾಗೂ ಮೂರೂ ಕಂಪನಿಗಳ ಪೀಠೋಪಕರಣಗಳ ದರ ಪಟ್ಟಿಯನ್ನು ಅನುಬಂಧದಲ್ಲಿ ನೀಡಲಾಗಿದೆ.

| ಕ್ರ.ಸಂ. | ಕಂಪನಿಯ ಹೆಸರು | ವಿವರ | ಪ್ರಮಾಣ | ಬೆಲೆ ರೂ.ಗಳಲ್ಲಿ | ಒಟ್ಟು ರೂ. ಗಳಲ್ಲಿ |
|---|---|---|---|---|---|
| 1 | ಜಿ.ಆರ್. ಎಂಟರ್ ಪ್ರೈಸಸ್ | 3 ಸಿಸೀಟ್‌ಗಳ ಒಂದು ಸೋಫಾ ಹಾಗೂ ಒಂದೊಂದು ಸೀಟ್‌ಗಳ ಎರಡು ಸೋಫಾ | ಅನುಬಂಧದಲ್ಲಿ ಲಗತ್ತಿಸಲಾಗಿದೆ | | 41995–00 |
| 2 | ಶ್ರೀ ಜಗನ್ನಾಥ್ ಟ್ರೇಡರ್ಸ್ | –ಮೇಲಿನಂತೆ– | | | 44265–00 |
| 3 | ಧನಲಕ್ಷ್ಮಿ ಎಂಟರ್‌ಪ್ರೈಸಸ್ | –ಮೇಲಿನಂತೆ– | | | 37455–00 |

ಈ ಮೇಲ್ಕಂಡ 03 ಕಂಪನಿಗಳಿಂದ ಪಡೆದ ದರಗಳನ್ನು ಅವಲೋಕಿಸಿ ಅತಿ ಕಡಿಮೆ ದರ ನೀಡಿರುವ ಧನಲಕ್ಷ್ಮಿ ಎಂಟರ್ ಪ್ರೈಸಸ್, ನಂ.ಡಿ/28, 1ನೇ ಮುಖ್ಯ ರಸ್ತೆ, ರಾಮಚಂದ್ರಪುರಂ, ಬೆಂಗಳೂರು ರವರಿಗೆ ರೂ. 37455–00 ಗಳ (ಮೂವತ್ತೇಳು ಸಾವಿರದ ನಾಲ್ಕನೂರ ಐವತ್ತೈದು ರೂ.ಗಳು ಮಾತ್ರ) ವೆಚ್ಚದಲ್ಲಿ 3 ಸೀಟ್‌ಗಳ ಒಂದು ಸೋಫಾ ಹಾಗೂ ಒಂದೊಂದು ಸೀಟ್‌ಗಳ ಎರಡು ಸೋಫಾ ಸೆಟ್‌ಗಳನ್ನು ಸರಬರಾಜು ಮಾಡಲು ಈ ಕೆಳಕಂಡಂತೆ ಆದೇಶಿಸಿದೆ. ದರಪಟ್ಟಿಯು ವ್ಯಾಟ್ ತೆರಿಗೆ ಹಾಗೂ ಸಾಗಾಣೆ ವೆಚ್ಚಗಳನ್ನು ಒಳಗೊಂಡಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 115 ಸ್ವೀಮರ 2010 ಬೆಂಗಳೂರು, ದಿನಾಂಕ : 12–11–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಇಲಾಖೆಯ ಕಾರ್ಯದರ್ಶಿಯವರ ಉಪಯೋಗಕ್ಕಾಗಿ ಮೂರು ಸೀಟ್‌ಗಳುಳ್ಳ ಒಂದು ಸೋಫಾ ಹಾಗೂ ಒಂದೊಂದು ಸೀಟ್‌ಗಳ ಎರಡು ಸೋಫಾ ಸೆಟ್‌ಗಳನ್ನು ಸರಬರಾಜು ಮಾಡಲು 03 ಕಂಪನಿಗಳಿಂದ ದರಪಟ್ಟಿಗಳನ್ನು ಕರೆದಿದ್ದು ಅನುಬಂಧದಲ್ಲಿರುವ ಸೋಫಾ ಸೆಟ್‌ಗಳಿಗೆ ಅತಿ ಕಡಿಮೆ ದರ ರೂ. 37455-00ಗಳ (ಮೂವತ್ತೇಳು ಸಾವಿರದ ನಾಲ್ಕನೂರ ಐವತ್ತೈದು ರೂ.ಗಳು ಮಾತ್ರ) ಗಳನ್ನು ಸೂಚಿಸಿರುವ-ಬೆಂಗಳೂರಿನ ಧನಲಕ್ಷ್ಮಿ ಎಂಟರ್‌ಪ್ರೈಸಸ್, ನಂ. ಡಿ/28, 1ನೇ ಮುಖ್ಯ ರಸ್ತೆ, ರಾಮಚಂದ್ರಪುರಂ ರವರಿಗೆ ಸೋಫಾ ಸೆಟ್‌ಗಳನ್ನು ಸರಬರಾಜು ಮಾಡಲು ಆದೇಶ ನೀಡಿದೆ.

ಈ ವೆಚ್ಚವನ್ನು ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ : 4 ಡಿಎಸ್‌ವೈ 2010, ದಿನಾಂಕ : 13-05-2010ರಲ್ಲಿ ನೀಡಿರುವ ಆದೇಶದನ್ವಯ ಲೆಕ್ಕ ಶೀರ್ಷಿಕೆ 2052-00-090-0-01-053 (ಪೀಠೋಪಕರಣ ಮತ್ತು ಜೋಡಣೆಗಳ ವೆಚ್ಚಗಳು) ಅಡಿಯಲ್ಲಿ ಭರಿಸಲು ಧನಲಕ್ಷ್ಮಿ ಎಂಟರ್‌ಪ್ರೈಸಸ್ ಕಂಪನಿಗೆ ರೂ. 37455-00 ಗಳ (ಮೂವತ್ತೇಳು ಸಾವಿರದ ನಾಲ್ಕನೂರ ಐವತ್ತೈದು ರೂ.ಗಳು ಮಾತ್ರ) ಮೊತ್ತವನ್ನು ಸಿಆಸುಇ ಲೆಕ್ಕ ಪತ್ರ ಶಾಖೆಯು ಡಿ.ಸಿ.ಬಿಲ್ ಮೂಲಕ ಬಿಡುಗಡೆ ಮಾಡುವುದು.

ಧನಲಕ್ಷ್ಮಿ ಎಂಟರ್ ಪ್ರೈಸಸ್ ಕಂಪನಿಯು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಇಲಾಖೆಗೆ ಮೂರು ಸೀಟ್‌ಗಳುಳ್ಳ ಒಂದು ಸೋಫಾ ಹಾಗೂ ಒಂದೊಂದು ಸೀಟ್‌ಗಳ ಎರಡು ಸೋಫಾ ಸೆಟ್‌ಗಳನ್ನು ಕೂಡಲೇ ಸರಬರಾಜು ಮಾಡುವುದು ಹಾಗೂ ಸಿಆಸು ಇಲಾಖೆಯಿಂದ ನೀಡುವ ಮೊತ್ತಕ್ಕೆ ಸ್ವೀಕೃತಿ ನೀಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ. ಆರ್. 2852 ಕನ್ನಡ ಮತ್ತು ಸಂಸ್ಕೃತಿ ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಎಸ್.ಎಂ. ಬೇವೂರ್ ಕೆ.ಎ.ಎಸ್. ಅಧಿಕಾರಿ ಮತ್ತು ಇತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಶ್ರೀ ಬಸವರಾಜ ಭರಶೆಟ್ಟಿ, ಪ್ರ.ದ.ಸ. ಮತ್ತು ಶ್ರೀ ಜನಾರ್ಧನ್, ಪ್ರ.ದ.ಸ. ಇವರುಗಳಿಗೆ ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 112 ಎಸ್‌ಇಎನ್ 2000. ದಿನಾಂಕ: 04-04-2001.
2. ಉಪ ಲೋಕಾಯುಕ್ತರ ಪತ್ರ ಸಂಖ್ಯೆ: ಲೋಕ್/ಎಆರ್‌ಇ-1/ಇಎನ್‌ಕ್ಯೂ. 109/02-03 ದಿನಾಂಕ: 26-07-2005.
3. ನೋಟೀಸು ಸಂಖ್ಯೆ: ಸಿಆಸುಇ 112 ಎಸ್‌ಇಎನ್ 2000. ದಿನಾಂಕ: 16/17-08-2005.
4. ಶ್ರೀ ಬಸವರಾಜು ಭರಶೆಟ್ಟಿ, ಪ್ರ.ದ.ಸ. ಇವರ ನೋಟೀಸಿಗೆ ಲಿಖಿತ ಉತ್ತರ ದಿನಾಂಕ: 05-12-2005.
5. ಶ್ರೀ ಜನಾರ್ಧನ್ ಪ್ರ.ದ.ಸ. ಇವರ ನೋಟೀಸಿಗೆ ಲಿಖಿತ ಉತ್ತರ ದಿನಾಂಕ: 19-09-2005.
6. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 112 ಎಸ್‌ಇಎನ್ 2000 ದಿನಾಂಕ: 24-06-2006.
7. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 112 ಎಸ್‌ಇಎನ್ 2000 (ಭಾಗ) ದಿನಾಂಕ 11-12-2006.

**ಪ್ರಸ್ತಾವನೆ :**

ಬೀದರ್ ಜಿಲ್ಲಾ ಪಂಚಾಯಿತಿಯಲ್ಲಿ ಶ್ರೀ ಎಸ್.ಎಂ. ಬೇವೂರ್, ಕೆ.ಎ.ಎಸ್. ಅಧಿಕಾರಿ ಇವರು ಸಹಾಯಕ ಕಾರ್ಯದರ್ಶಿಯಾಗಿ, ಶ್ರೀ ಗುಂಡಪ್ಪ ರವರು ಮುಖ್ಯ ಲೆಕ್ಕಾಧಿಕಾರಿ ಹುದ್ದೆಯಲ್ಲಿ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಕಛೇರಿ, ಬೀದರ್ ಇಲ್ಲಿ ಶ್ರೀಮತಿ ಪಿ. ವಸುಂಧರಾ ದೇವಿ ರವರು ಸಹಾಯಕ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ ಹುದ್ದೆಯಲ್ಲಿ ಶ್ರೀ ಖಲೀಲ್ ಅಹಮದ್ ರವರು ಅಧೀಕ್ಷಕರ ಹುದ್ದೆಯಲ್ಲಿ ಶ್ರೀ ದುಂಡಪ್ಪ ರವರು ಸರ್ವಿಸ್ ಇಂಜಿನಿಯರ್ ಹುದ್ದೆಯಲ್ಲಿ ಶ್ರೀ ಮಾಣಿಕ್‌ರಾವ್ ಕಾಟೆ, ಶ್ರೀ ಬಸವರಾಜ್ ಭರಶೆಟ್ಟಿ, ಶ್ರೀ ರಘುನಾಥ್‌ರಾವ್ ಮತ್ತು ಶ್ರೀ ಬಿ. ಜನಾರ್ಧನ್ ಇವರುಗಳು ಪ್ರ.ದ.ಸ. ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿದಾಗ 1991-92, 93-94, ಮತ್ತು 94-95 ನೇ ಸಾಲಿನಲ್ಲಿ ಬೀದರ್ ಜಿಲ್ಲಾ ಪಂಚಾಯತ್ ವ್ಯಾಪ್ತಿಯ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಕಛೇರಿಯಲ್ಲಿ ನಡೆದಿದೆ ಎನ್ನಲಾದ ಭಾರಿ ಪ್ರಮಾಣದ ಹಣಕಾಸಿನ ಅವ್ಯವಹಾರಗಳ ಆರೋಪಕ್ಕಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 14ಎ ರನ್ವಯ ಮೇಲ್ಕಂಡ ಅಪಾದಿತರುಗಳ ವಿರುದ್ದ ಮೇಲೆ (1)ರಲ್ಲಿ ಓದಲಾದ ದಿನಾಂಕ: 04-04-2001ರ ಸರ್ಕಾರಿ ಆದೇಶದಲ್ಲಿ ಸನ್ಮಾನ್ಯ ಉಪ ಲೋಕಾಯುಕ್ತರ ಮೂಲಕ ಪೂರ್ಣ ಪ್ರಮಾಣದ ಇಲಾಖಾ ವಿಚಾರಣೆ ನಡೆಸಲು ಅವರಿಗೆ ವಹಿಸಿ ಆದೇಶಿಸಲಾಯಿತು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಪತ್ರದೊಂದಿಗೆ ಉಪ ಲೋಕಾಯುಕ್ತರು ಹೆಚ್ಚುವರಿ ನಿಬಂಧಕರು, ವಿಚಾರಣೆಗಳು-1 ಕರ್ನಾಟಕ ಲೋಕಾಯುಕ್ತ ಕಛೇರಿ ಇವರು ವಿಚಾರಣೆ ನಡೆಸಿ ಸಲ್ಲಿಸಿದ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಅಪಾದಿತರ ಮೇಲಿನ ಆರೋಪಗಳ ಕುರಿತು ವಿಚಾರಣಾಧಿಕಾರಿಗಳು ಈ ಕೆಳಕಂಡಂತೆ ನಿರ್ಣಯ ನೀಡಿರುತ್ತಾರೆ.

ಬೀದರ್ ಜಿಲ್ಲಾ ಪಂಚಾಯತ್ ವ್ಯಾಪ್ತಿಯ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಕಛೇರಿಯಲ್ಲಿ 1991-92, 93-94 ಮತ್ತು 94-95 ನೇ ಸಾಲಿನಲ್ಲಿ ನಡೆದಿರುವ ಹಣಕಾಸಿನ ಅವ್ಯವಹಾರದ ಸಂಬಂಧ ಒಟ್ಟು 16 ಆರೋಪಗಳನ್ನು ಮಾಡಲಾಗಿದೆ. ಶ್ರೀ ಬಸವರಾಜ ಭರಶೆಟ್ಟಿ, ಪ್ರ.ದ.ಸ. ಬೀದರ್ ಜಿಲ್ಲಾ ಮತ್ತು ಆರೋಗ್ಯ ಕುಟುಂಬ ಇಲಾಖೆ ಇವರ ಮೇಲೆ ಕ್ರಮ ಸಂಖ್ಯೆ 1, 6. 15 ಮತ್ತು 16ನೇ ಆರೋಪಗಳನ್ನು ಹೊರಿಸಲಾಗಿದೆ. ಸ್ಟಾಕ್ ವಹಿಯನ್ನು ಸರಿಯಾಗಿ ನಿರ್ವಹಿಸದೇ ರೂ. 23,540/- ಗಳನ್ನು ನಷ್ಟವಾಗಿರುವ 2 ನೇ ಆರೋಪ Expiry ದಿನಾಂಕ ಮುಗಿಯುವ ಮುನ್ನ ಸಾಮಗ್ರಿಗಳನ್ನು ಸರಬರಾಜು ಮಾಡದೆ ಹಾಗೂ ನಿಷ್ಪ್ರಯೋಜಕವಾಗಿ ರೂ. 10,536/- ನಷ್ಟ ಉಂಟು ಮಾಡಿರುವ 6ನೇ ಆರೋಪ, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಯವರು, ಆದೇಶವಿಲ್ಲದೇ ಹಲವಾರು ಸಂಸ್ಥೆಗಳಿಗೆ ಸಾಮಗ್ರಿಗಳನ್ನು ಸರಬರಾಜನು ಮಾಡಿರುವ 15 ನೇ ಆರೋಪ,

ಸ್ಟಾಕ್ ವಹಿಯಲ್ಲಿ ಸುಮಾರು ರೂ. 34,31,655/- ಮೌಲ್ಯದ ಸಾಮಗ್ರಿಗಳನ್ನು ಕಡಿಮೆ ಬರುವುದಕ್ಕೆ ಕಾರಣರಾಗಿರುವ 16ನೇ ಆರೋಪಗಳು ಸಾಬೀತಾಗಿದೆಯೆಂದು ಹಾಗೂ ಶ್ರೀ ಜನಾರ್ಧನ್ ಪ್ರ.ದ.ಸ. ಬೀದರ್ ಜಿಲ್ಲಾ ಮತ್ತು ಆರೋಗ್ಯ ಕುಟುಂಬ ಕಲ್ಯಾಣ ಇಲಾಖೆ ಇವರ ವಿರುದ್ದದ 10 ಮತ್ತು 11 ನೇ ಆರೋಪಗಳನ್ನು ಹೊರಿಸಲಾಗಿದ್ದು, ಸಾಮಗ್ರಿಗಳನ್ನು ಸ್ವೀಕರಿಸದೇ ಇದ್ದರೂ ಖೋಟಾ ಪ್ರಮಾಣ ಪತ್ರದ ಆಧಾರದ ಮೇಲೆ ವಹಿಯಲ್ಲಿ ನಮೂದಿಸಿ ರೂ. 21,840/- ಗಳ ನಷ್ಟ ಉಂಟು ಮಾಡಿದ 10 ನೇ ಆರೋಪ, ಪ್ರಾಥಮಿಕ ಆರೋಗ್ಯ ಕೇಂದ್ರಗಳಿಗೆ ಸಾಮಗ್ರಿಗಳನ್ನು ಸರಬರಾಜು ಮಾಡದೇ ಇದ್ದರೂ ಅದನ್ನು ವಹಿಯಲ್ಲಿ ನಮೂದಿಸಿ ರೂ. 2.91 ಲಕ್ಷ ನಷ್ಟಕ್ಕೆ ಕಾರಣರಾಗಿರುವ 11 ನೇ ಆರೋಪ ಸಾಬೀತಾಗಿದೆ ಎಂದು ನಿರ್ಣಯಿಸಿ ವರದಿ ಸಲ್ಲಿಸಿರುತ್ತಾರೆ.

ವಿಚಾರಣಾ ವರದಿಯನ್ನು ಪರಾಮರ್ಶಿಸಿದ ಸನ್ಮಾನ್ಯ ಉಪ ಲೋಕಾಯುಕ್ತರು ಶ್ರೀ ಬಸವರಾಜು ಭರಶೆಟ್ಟಿ ಮತ್ತು ಶ್ರೀ ಬಿ. ಜನಾರ್ಧನ್ ಪ್ರ.ದ.ಸ. ಅವರುಗಳನ್ನು ಸೇವೆಯಿಂದ ವಜಾಗೊಳಿಸುವಂತೆ ಹಾಗೂ ಸರ್ಕಾರಕ್ಕೆ ಉಂಟಾದ ನಷ್ಟ ವಸೂಲು ಮಾಡಲು ಶಿಫಾರಸ್ಸು ಮಾಡಿರುತ್ತಾರೆ. ವಿಚಾರಣಾ ವರದಿ ಹಾಗೂ ಸನ್ಮಾನ್ಯ ಉಪ ಲೋಕಾಯುಕ್ತರ ಶಿಫಾರಸ್ಸನ್ನು ಮೇಲೆ (3) ರಲ್ಲಿ ಓದಲಾದ ದಿನಾಂಕ 17-08-2005 ರ ನೋಟಿಸಿನೊಡನೆ ಶ್ರೀ ಬಸವರಾಜ ಭರಶೆಟ್ಟಿ ಮತ್ತು ಶ್ರೀ ಬಿ. ಜನಾರ್ಧನ್ ಅವರುಗಳಿಗೆ ಒದಗಿಸಿ ವಿಚಾರಣಾ ವರದಿ ಬಗ್ಗೆ ಏನಾದರೂ ಅಹವಾಲು ಇದ್ದಲ್ಲಿ ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು.

ಶ್ರೀ ಬಸವರಾಜ ಭರಶೆಟ್ಟಿ, ಅವರು ಸರ್ಕಾರದಿಂದ ಜಾರಿಗೊಳಿಸಲಾಗಿದ್ದ ನೋಟೀಸಿಗೆ ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ದಿನಾಂಕ 05-12-2005 ರ ಪತ್ರದಲ್ಲಿ ಉತ್ತರ ಸಲ್ಲಿಸಿ ರೂ. 34,65,731/- ಗಳ ನಷ್ಟಕ್ಕೆ ಅಧಿಕಾರಿಗಳು ಹೊಣೆಗಾರರೆಂದು, ಇಂತಹ ನಷ್ಟಕ್ಕೆ ಒಬ್ಬ ಕೆಳ ಹಂತದ ಪ್ರಥಮ ದರ್ಜೆ ಸಹಾಯಕನಾದ ತಾವು ಹೊಣೆಯಾಗುತ್ತಾನೆಂಬ ಅಂಶವು ನಂಬಲರ್ಹವಲ್ಲ, ಕಲ್ಪಿಸಿಕೊಳ್ಳಲು ಸಾಧ್ಯವಿಲ್ಲದ ಅಂಶವಾಗಿರುತ್ತದೆಂದು ತಿಳಿಸಿರುತ್ತಾರೆ. ವಿಚಾರಣಾಧಿಕಾರಿಗಳು ಈ ವಿಚಾರಣೆಯನ್ನು ಪೂರ್ವ ನಿರ್ಧರಿತ ಅಂಶಗಳನಿಟ್ಟುಕೊಂಡೇ ವಿಚಾರಣೆ ನಡೆಸಿರುತ್ತಾರೆಂದು ಕೋಟೇಷನ್ಸ್‌ಗಳನ್ನು ಕರೆಯಲಾಗಿತ್ತು ಎಂಬ ಅಂಶವನ್ನು ವಿಚಾರಣಾಧಿಕಾರಿಗಳು ಒಪ್ಪಲು ನಿರಾಕರಿಸಿರುತ್ತಾರೆಂದು, ಈ ಪ್ರಕರಣದಲ್ಲಿ ನಡೆದ ಅಂಶಗಳನ್ನು ವಿಚಾರಣಾಧಿಕಾರಿಗಳು ತಮ್ಮದೇ ಆದ ಕಾರಣಗಳಿಗಾಗಿ ನಿರ್ಲಕ್ಷಿಸಿರುತ್ತಾರೆ, ಹಾಗೂ ನಿರ್ಣಯವನ್ನು ಪೂರ್ವಗ್ರಹ ಪೀಡಿತರಾಗಿ ನೀಡಿರುತ್ತಾರೆ. ಈ ಪ್ರಕರಣದಲ್ಲಿ ಅಪರಾಧಿಯನ್ನು ನಿರಪರಾಧಿಯನ್ನಾಗಿಯೂ, ನಿರಪರಾಧಿಯನ್ನು ಅಪರಾಧಿಯನ್ನಾಗಿಯೂ ಬಿಂಬಿಸಿರುವ ಪ್ರವೃತ್ತಿಯು ನಡೆದಿರುತ್ತದೆ. ಮೇಲಾಧಿಕಾರಿಗಳು ಅವರವರ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಲು ತಮ್ಮಂತಹವರ ಮೇಲೆ ಆರೋಪಗಳನ್ನು ಸೃಷ್ಟಿಸಿರುತ್ತಾರೆ. ವಿಚಾರಣಾಧಿಕಾರಿಗಳೂ ಸಹ ಅದೇ ಜಾಡಿನಲ್ಲಿ ನಡೆದಿರುತ್ತಾರೆ. ಗೆಜಿಟೆಡ್ ಸಹಾಯಕರು ಅವಧಿ ಮುಗಿದ ಲಸಿಕೆಗಳನ್ನು ವಿತರಿಸಲು ಜವಾಬ್ದಾರರೆಂದು ತಿಳಿಸಿದರೂ ಎಲ್ಲಾ ನಷ್ಟವನ್ನು ತಮ್ಮ ತಲೆಗೆ ಕಟ್ಟಿರುತ್ತಾರೆ. ತಮ್ಮ ವಿರುದ್ಧ ಮಾಡಲಾದ 16ನೇ ಆರೋಪದ ಕುರಿತಂತೆ ಮೇಲಾಧಿಕಾರಿಯ ಸಮಕ್ಷಮದಲ್ಲಿ ಚಾರ್ಜ್ ವಹಿಸಿಕೊಳ್ಳುವ ಪ್ರಕ್ರಿಯೆ ನಡೆದಿರುತ್ತದೆ. ಅನಂತರ ರೂ. 34.00 ಲಕ್ಷಗಳ ನಷ್ಟವುಂಟಾಗಿದೆಯೆಂದು ಜಿಲ್ಲಾ ಆರೋಗ್ಯ ಅಧಿಕಾರಿಗಳಿಗೆ ವರದಿ ಕಳುಹಿಸಲಾಗಿದೆ ಚಾರ್ಜ್ ತೆಗೆದುಕೊಳ್ಳುವ ನಡುವಿನ 6 ತಿಂಗಳಲ್ಲಿ ಸದಿ ಸ್ಟೋರ್‌ನ ಜವಾಬ್ದಾರಿ ಗೆಜಿಟೆಡ್ ಸಹಾಯಕರ ಶಿಫಾರಸ್ಸಿನಲ್ಲಿಯೇ ಇತ್ತು. ಈ ನಷ್ಟಕ್ಕೆ ಅವರೇ ಕಾರಣರಾಗಿರುತ್ತಾರೆ. ಆದರೆ ಅವರ ಬದಲಿಗೆ ತಮ್ಮನ್ನು ಜವಾಬ್ದಾರರನ್ನಾಗಿ ಮಾಡಿರುವುದು ಸರಿಯಲ್ಲ. ಹೀಗಾಗಿ ವಿಚಾರಣಾಧಿಕಾರಿಗಳು ನೀಡಿರುವ ನಿರ್ಣಯವನ್ನು ಒಪ್ಪಿಕೊಳ್ಳದಂತೆ ಕೋರಿರುತ್ತಾರೆ. ಹಾಗೂ ಸನ್ಮಾನ್ಯ ಉಪ ಲೋಕಾಯುಕ್ತರ ಪರಾಮರ್ಶೆಯೂ ಸಹ ಅದೇ ರೀತಿ ಸಾಗಿರುತ್ತದೆಯೆಂದು ತಿಳಿಸಿರುತ್ತಾರೆ. ವಿಚಾರಣೆಯನ್ನು ನಡೆಸುವಾಗ ಸಹಜ ನ್ಯಾಯ ತತ್ವವನ್ನು ವಿಚಾರಣಾಧಿಕಾರಿಗಳು ಅನುಸರಿಸಿದ್ದಾರೆಯೇ ಎಂದು ಪರಾಮರ್ಶಿಸಬೇಕಾಗಿದ್ದರೂ ಸಹ, ಆ ರೀತಿ ಮಾಡದೇ ನೇರವಾಗಿ ದಂಡನೆಯನ್ನು ವಿಧಿಸುವಂತೆ ಶಿಫಾರಸ್ಸು ಮಾಡಿರುತ್ತಾರೆಂದು ವಿಚಾರಣೆಯು ನಿಯಮ ಬಾಹಿರವಾಗಿ ನಡೆದರೂ ಸಹ ಆ ವರದಿಯನ್ನು ಒಪ್ಪಿಕೊಂಡು ಸೇವೆಯಿಂದ ತಮ್ಮನ್ನು ವಜಾ ಮಾಡಲು ಶಿಫಾರಸ್ಸು ಮಾಡಿರುವುದು ಸರಿಯಾದ ಕ್ರಮವಲ್ಲವೆಂದು, ರೂ. 34.00 ಲಕ್ಷಗಳ ನಷ್ಟಕ್ಕೆ ತಮ್ಮೊಬ್ಬನನ್ನೆ ಹೊಣೆ ಮಾಡುವುದಾದರೆ ತಮ್ಮ ಮೇಲೆ ಅಷ್ಟೊಂದು ಅಧಿಕಾರಿಗಳ ಅಗತ್ಯವಾದರೂ ಏನಿತ್ತು. ಇದನ್ನು ಸನ್ಮಾನ್ಯ ಉಪ ಲೋಕಾಯುಕ್ತರು ಪರಿಗಣಿಸಿರುವುದಿಲ್ಲ. ಒಬ್ಬ ಸರ್ಕಾರಿ ನೌಕರನನ್ನು ಸೇವೆಯಿಂದ ವಜಾ ಮಾಡಲು ಶಿಫಾರಸ್ಸು ಮಾಡುವ ಮುಂಚೆ ಆತನ ಪರಿಸ್ಥಿತಿ ಏನಿತ್ತು ಆತ ಕರ್ತವ್ಯದ ಮೇಲಿದ್ದನೇ ಅಥವಾ ರಜೆಯ ಮೇಲಿದ್ದನೇ, ಚಾರ್ಜ್ ಬಿಟ್ಟುಕೊಡದ ಸ್ಥಿತಿಯಲ್ಲಿದ್ದನೇ, ಅಮಾನತ್ತಿನಲ್ಲಿದ್ದನೇ, ಅಮಾನತ್ತಿನಲ್ಲಿದ್ದಲ್ಲಿ ಅವನು ಕಛೇರಿಗೆ ಬರುವುದಾದರೂ, ಚಾರ್ಜ್ ಕೊಡುವ ಪ್ರಶ್ನೆ ಎಲ್ಲಿ ಉದ್ಭವಿಸುತ್ತದೆ. ಈ ಎಲ್ಲಾ ಅಂಶಗಳನ್ನು ವಿಚಾರಣಾಧಿಕಾರಿಗಳು ಪರಿಗಣಿಸಿದ್ದಾರೆಯೇ ಅಥವಾ ಇಲ್ಲವೇ ಎಂಬ ಅಂಶಗಳನ್ನು ಪರಾಮರ್ಶಿಸದೇ ತಮ್ಮನ್ನು ಸೇವೆಯಿಂದ ವಜಾ ಮಾಡಲು ಶಿಫಾರಸ್ಸು ಮಾಡಿರುವುದು ತುಂಬಾ ಅನ್ಯಾಯವೆಂದು ತಿಳಿಸಿ ತಮ್ಮನ್ನು ಸೇವೆಯಿಂದ ವಜಾ ಮಾಡಬೇಕೆಂಬ ಸನ್ಮಾನ್ಯ ಉಪ ಲೋಕಾಯುಕ್ತರ ಶಿಫಾರಸ್ಸನ್ನು ಒಪ್ಪಿಕೊಳ್ಳದೇ ಆರೋಪಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ.

ಶ್ರೀ ಬಿ. ಜನಾರ್ಧನ್, ಪ್ರ.ದ.ಸ. ಅವರು ನೋಟೀಸಿಗೆ ಮೇಲೆ (5) ರಲ್ಲಿ ಓದಲಾದ ದಿನಾಂಕ 19-09-2005 ರಲ್ಲಿ ಉತ್ತರ ಸಲ್ಲಿಸಿ ವಿಚಾರಣೆ ಪೂರ್ವದಲ್ಲಿ ತಮ್ಮ ಮೇಲೆ ಮಾಡಲಾದ ಅಪಾದನೆಗಳನ್ನು ನಿರಾಕರಿಸಿರುತ್ತೇನೆಯೆಂದು ತಿಳಿಸಿ, ವಿಚಾರಣಾಧಿಕಾರಿಗಳು ಸಾಕ್ಷಿಯ ಹೇಳಿಕೆಯನ್ನಾಧರಿಸಿ ತಮ್ಮ ಮೇಲೆ 2 ಅಪಾದನೆಗಳು ರುಜುವಾತಾಗಿದೆಯೆಂದು ವರದಿ ನೀಡಿರುವುದು ಸರಿಯಲ್ಲ. ಇದಕ್ಕೆ ಯಾವುದೇ ಸಾಕ್ಷ್ಯಾಧ್ಯಾರಗಳ ಆಧಾರವಿರುವುದಿಲ್ಲ. ಎಂಟ್ರಿಗಳು ಯಾರ ಕೈ ಬೆರಳುಗಳ ಬರಹದಲ್ಲಿದೆಯೆನ್ನುವುದನ್ನು ದೃಢೀಕರಿಸಿಕೊಂಡಿರುವುದಲ್ಲ. ಸ್ಟಾಕ್ ತೆಗೆದುಕೊಳ್ಳದೇ ಸ್ಟಾಕ್ ಪ್ರಮಾಣ ಪತ್ರವನ್ನು ಹಾಕಲಾಗಿದೆಯೆಂದು ಹೇಳಿರುವುದು ಕಾಯ್ದೆಯನ್ವಯ ಇರುವುದಿಲ್ಲ. ಸಾಕ್ಷಿಯು ಗೆಜಿಟಿಡ್ ಸಹಾಯಕರ ಜೊತೆ ತಮ್ಮನ್ನು ಹೊಣೆಗಾರರನ್ನಾಗಿ ಮಾಡಿರುವುದು ಸರಿಯಿರುವುದಿಲ್ಲ. ಸಾಕ್ಷಿಯು ಸಂಪೂರ್ಣ ತನಿಖೆ ಮಾಡದೇ ಸರಿಯಾದ ದಾಖಲೆಗಳನ್ನು ಪರಿಶೀಲಿಸಿದೆ ಸ್ಟಾಕ್ ಪುಸ್ತಕವನ್ನು ಬೇರೆ ಪುಟಗಳಲ್ಲಿ ನಮೂದಾಗಿದೆಯೇ ಎಂದು ಸಂಶಯ ವ್ಯಕ್ತಪಡಿಸಿದ್ದ ಆಧಾರದ ಮೇಲಿಂದಲೇ ಚಾರ್ಜ್ ರುಜುವಾತಾಗಿದೆಯೆಂದು ಹೇಳಲು ಬರುವುದಿಲ್ಲ. ತಮಗೆ ಹಣ ಡ್ರಾ ಮಾಡುವ ಅಧಿಕಾರವೂ ಅಲ್ಲ ಅಥವಾ ತಾವು ಬಟವಾಡೆ ಮಾಡುವ ಅಧಿಕಾರಿಯೂ ಅಲ್ಲ. ಕೇವಲ ಸ್ಟೋರ್ ಕೀಪರ್ ಆಗಿದ್ದ ಮೇರೆಗೆ ನಷ್ಟಕ್ಕೆ ನಾನೇ ಜವಾಬ್ದಾರನೆಂದು ಹೇಳಿರುವುದು ಸರಿಯಲ್ಲ. ಬಿಲ್ಲುಗಳಿಗೆ ಸಂಬಂಧಿಸಿದ ವಸ್ತುಗಳನ್ನು ಪಡೆದ ಬಗ್ಗೆ ಸ್ಟಾಕ್ ರಿಜಿಸ್ಟರ್‌ನಲ್ಲಿ ನಮೂದು ಇದ್ದ ಕುರಿತಂತೆ ವರದಿಯಲ್ಲಿ ಪ್ರಸ್ತಾಪಿಸಲಾಗಿದೆ. ಸಂಬಂಧಪಟ್ಟ ಪ್ರಾಥಮಿಕ ಆರೋಗ್ಯ ಕೇಂದ್ರಗಳಿಂದ ವಸ್ತುಗಳು ಮುಟ್ಟಿರುವುದಿಲ್ಲವೆಂದು ಯಾವುದೇ ಆಕ್ಷೇಪಣೆಯೂ ಸಹ ಬಂದಿರುವುದಿಲ್ಲವೆಂದು ತಿಳಿಸಿ, ತಾವು ಪ್ರಾಮಾಣಿಕ ಸರ್ಕಾರಿ ನೌಕರನಾಗಿ ಸೇವೆ ಸಲ್ಲಿಸುತ್ತಾ ಬಂದಿದ್ದು, ಇದುವರೆವಿಗೂ ಯಾವುದೇ ದುರ್ನಡತೆಯ ಪ್ರಕರಣಗಳು ನಡೆದಿರುವುದಿಲ್ಲವೆಂದು ತಿಳಿಸಿ, ತಮ್ಮನ್ನು ಸೇವೆಯಿಂದ ವಜಾ ಮಾಡಿದ್ದಲ್ಲಿ ತಮ್ಮ ಕುಟುಂಬವು ತುಂಬಾ

ಸಂಕಷ್ಟಕ್ಕೀಡಾಗುವುದರಿಂದ ಕಾನೂನಿನ ರೀತಿಯಲ್ಲಿ ಹಾಗೂ ಮಾನವೀಯ ದೃಷ್ಟಿಯಿಂದ ಸನ್ಮಾನ್ಯ ಉಪ ಲೋಕಾಯುಕ್ತರವರು ತಮ್ಮನ್ನು ವಜಾಗೊಳಿಸುವಂತೆ ಮಾಡಿರುವ ಶಿಫಾರಸ್ಸನ್ನು ಒಪ್ಪಿಕೊಳ್ಳದಂತೆ ಮನವಿ ಮಾಡಿ ತಮ್ಮನ್ನು ಆರೋಪಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ.

ವಿಚಾರಣಾ ವರದಿ ಹಾಗೂ ಉಪ ಲೋಕಾಯುಕ್ತರ ಶಿಫಾರಸ್ಸಿನನ್ವಯ ಶ್ರೀ ಎಸ್.ಎಂ. ಬೇವೂರ್, ಶ್ರೀಮತಿ ಪಿ. ವಸುಂಧರಾದೇವಿ, ಶ್ರೀ ದುಂಡಪ್ಪ, ಶ್ರೀ ಮಾಣಿಕ್‌ರಾವ್ ಕಾಟೆ ಅವರುಗಳಿಗೆ ಸಂಬಂಧಿಸಿದಂತೆ ಮೇಲೆ ಕ್ರಮ ಸಂಖ್ಯೆ (6) ರಲ್ಲಿ ಓದಲಾದ ದಿನಾಂಕ 24–06–2006 ರ ಆದೇಶದಲ್ಲಿ ಹಾಗೂ ಶ್ರೀ ಗುಂಡಪ್ಪ ರವರು ದಿನಾಂಕ 02–04–2004 ರಂದು ನಿಧನ ಹೊಂದಿರುವುದರಿಂದ ಹಾಗೂ ಶ್ರೀ ರಘುನಾಥರಾವ್ ರವರು ನಿವೃತ್ತಿ ಹೊಂದಿರುವುದರಿಂದ ಅವರುಗಳಿಗೆ ಸಂಬಂಧಿಸಿದಂತೆ ಮೇಲೆ ಕ್ರಮ ಸಂಖ್ಯೆ (7) ರಲ್ಲಿ ಓದಲಾದ ದಿನಾಂಕ 11–02–2006 ರ ಆದೇಶದಲ್ಲಿ ಈ ಕೆಳಕಂಡಂತೆ ಕ್ರಮ ಕೈಗೊಳ್ಳಲಾಗಿದೆ.

1. ಶ್ರೀ ಎಸ್.ಎಂ. ಬೇವೂರು, ಕೆಎಎಸ್ ಇವರಿಗೆ ವಾಗ್ದಂಡನೆ ವಿಧಿಸಲಾಗಿದೆ.
2. ಡಾ: ಪಿ. ವಸುಂಧರಾದೇವಿ, ಸಹಾಯಕ ಜಿಲ್ಲಾ ಅರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿ ಇವರ ಮೇಲಿನ ಆರೋಪ ಸಾಬೀತಾಗದ ಕಾರಣ ಆರೋಪಮುಕ್ತಗೊಳಿಸಲಾಗಿದೆ.
3. ಶ್ರೀ ದುಂಡಪ್ಪ, Service Engineer ಇವರ ಮೇಲಿನ ಆರೋಪ ಸಾಬೀತಾಗದ ಕಾರಣ ಆರೋಪಮುಕ್ತಗೊಳಿಸಲಾಗಿದೆ.
4. ಶ್ರೀ ಮಾಣಿಕ್ಯರಾವ್ ಕಾಟೆ, ಪ್ರ.ದ.ಸ. ಇವರ ಮೇಲಿನ ಆರೋಪ ಸಾಬೀತಾಗದ ಕಾರಣ ಆರೋಪಮುಕ್ತಗೊಳಿಸಲಾಗಿದೆ.
5. ಶ್ರೀ ಗುಂಡಪ್ಪ, ಮುಖ್ಯ ಲೆಕ್ಕಾಧಿಕಾರಿ ಇವರು ನಿಧನ ಹೊಂದಿದ್ದರಿಂದ ಇವರ ನಿವೃತ್ತಿ ಸೌಲಭ್ಯಗಳಲ್ಲಿ ರೂ. 9600–00 ಗಳನ್ನು ಕಡಿತಗೊಳಿಸಲು ಆದೇಶಿಸಿದೆ.
6. ಶ್ರೀ ರಘುನಾಥರಾವ್, ಪ್ರ.ದ.ಸ. ಇವರಿಗೆ ರೂ. 11140–00 ಗಳನ್ನು ಇವರ ನಿವೃತ್ತಿ ವೇತನದಿಂದ ಕಡಿತಗೊಳಿಸಲು ಆದೇಶಿಸಲಾಗಿದೆ.
7. ಶ್ರೀ ಖಲೀಲ್ ಅಹಮದ್ ರವರು ಸೇವೆಯಿಂದ ನಿವೃತ್ತರಾಗಿದ್ದರಿಂದ ಇವರ ಮೇಲಿನ ಆರೋಪಗಳು Barred by limitation ಆಗಿರುವುದು ಎಂದು ಉಪ ಲೋಕಾಯುಕ್ತರು ನಿರ್ಣಹಿಸಿರುವುದರಿಂದ ಇವರ ಮೇಲಿನ ವಿಚಾರಣೆಯನ್ನು ಕೈ ಬಿಟ್ಟಿರುತ್ತಾರೆ.

ಇನ್ನುಳಿದ ಇಬ್ಬರು ಆಪಾದಿತರು ಕುರಿತಂತೆ ವಿಚಾರಣಾ ವರದಿ, ನೌಕರರ ಅಹವಾಲು ಹಾಗೂ ಸನ್ಮಾನ್ಯ ಉಪ ಲೋಕಾಯುಕ್ತರು ಸಲ್ಲಿಸಿರುವ ದಾಖಲೆಗಳನ್ನು ಪರಿಶೀಲಿಸಲಾಗಿದೆ. ವಿಚಾರಣಾಧಿಕಾರಿಯವರ ವಿಚಾರಣಾ ವರದಿ ಹಾಗೂ ಸನ್ಮಾನ್ಯ ಉಪ ಲೋಕಾಯುಕ್ತರವರ ಶಿಫಾರಸ್ಸನ್ನು ಒಪ್ಪಿಕೊಳ್ಳದೇ ತಮ್ಮನ್ನು ಆರೋಪಮುಕ್ತರನ್ನಾಗಿಸಲು ಶ್ರೀ ಬಸವರಾಜ ಭರಶೆಟ್ಟಿ ಹಾಗೂ ಶ್ರೀ ಬಿ. ಜನಾರ್ಧನ್ ಇವರುಗಳು ಕೋರಿಕೆಯಲ್ಲಿ ಯಾವುದೇ ಸಮರ್ಥನೆಯನ್ನು ನೀಡಿರುವುದಿಲ್ಲ. ಅವರುಗಳ ವಾದವನ್ನು ಈಗಾಗಲೇ ವಿಚಾರಣಾ ಸಮಯದಲ್ಲಿ ಪರಿಶೀಲಿಸಿ ಅವುಗಳು ಸ್ವೀಕಾರಾರ್ಹವಲ್ಲವೆಂದು ನಿರ್ಣಯಿಸಲ್ಪಟ್ಟಿದೆ. ಹಾಗೂ ಅವರುಗಳ ಉತ್ತರವು ಯಾವುದೇ ಹೊಸ ಅಂಶಗಳಿಂದ ಕೂಡಿರುವುದಿಲ್ಲ. ಆದಾಗ್ಯೂ, ಸನ್ಮಾನ್ಯ ಉಪ ಲೋಕಾಯುಕ್ತರು ಮಾಡಿದ ಶಿಫಾರಸ್ಸನ್ನು ಸಾಕ್ಷ್ಯಾಧಾರಗಳು ಹಾಗೂ ಆರೋಪಿತ ಅಧಿಕಾರಿಗಳ ಮನವಿಯೊಂದಿಗೆ ಪರಿಶೀಲಿಸಿದಾಗ, ಸನ್ಮಾನ್ಯ ಉಪ ಲೋಕಾಯುಕ್ತರ ದಂಡನಾ ಶಿಫಾರಸ್ಸು ಕಠಿಣವಾಗಿದೆಯೆಂದು ಮನಗಂಡು, ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 112 ಎಸ್ಇಎನ್ 2000, ಬೆಂಗಳೂರು, ದಿನಾಂಕ : 27ನೇ ನವೆಂಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ 1957 ರ ನಿಯಮ 8 (VI) ಹಾಗೂ ಕೆ.ಸಿ.ಎಸ್.ಆರ್. ನಿಯಮ 214 ರಲ್ಲಿಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡಂತೆ ಆದೇಶಿಸುತ್ತದೆ.

1. ಶ್ರೀ ಜನಾರ್ಧನ್, ಪ್ರ.ದ.ಸ. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಕಛೇರಿ, ಬೀದರ್ ರವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿದೆ. ಹಾಗೂ ಅವರ ದುರ್ನಡತೆಯಿಂದ ಸರ್ಕಾರಕ್ಕೆ ಉಂಟಾದ ರೂ. 1,67, 340/– ಗಳನ್ನು (ಒಂದು ಲಕ್ಷದ ಅರವತ್ತೇಳು ಸಾವಿರದ ಮೂರುನೂರ ನಲವತ್ತು ರೂಪಾಯಿಗಳೂ ಮಾತ್ರ) ಅವರ ನಿವೃತ್ತಿ ಸೌಲಭ್ಯಗಳಿಂದ ವಸೂಲು ಮಾಡಬೇಕೆಂದು ಈ ಮೂಲಕ ಆದೇಶಿಸಿದೆ.

2. ಶ್ರೀ ಬಸವರಾಜ ಭರಶೆಟ್ಟಿ, ಪ್ರ.ದ.ಸ. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಕಛೇರಿ, ಬೀದರ್ ರವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿದೆ ಮತ್ತು ಅವರ ವಿಶ್ರಾಂತಿ ವೇತನದ ಶೇಕಡ 50 ರಷ್ಟು ಮೊತ್ತವನ್ನು ಶಾಶ್ವತವಾಗಿ ಕಡಿತಗೊಳಿಸಬೇಕೆಂದು ಹಾಗೂ ಅವರ ದುರ್ನಡತೆಯಿಂದ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿದ್ದಕ್ಕಾಗಿ ಅವರ ಡಿ.ಸಿ.ಆರ್.ಜಿ. ಮೊತ್ತವನ್ನು ಸಂಪೂರ್ಣವಾಗಿ ಮುಟ್ಟುಗೋಲು ಹಾಕಿಕೊಳ್ಳಬೇಕೆಂದು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**(ಎಂ. ವಾಸುದೇವಮೂರ್ತಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಪಿ. ಆರ್. 2901 ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–2)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಎಸ್.ಟಿ. ಮೋಹನರಾಜು, ಕೆಎಎಸ್ (ಕಿರಿಯ ಶ್ರೇಣಿ), ಹಿಂದಿನ ಉಪ ವಿಭಾಗಾಧಿಕಾರಿ, ಶಿರಸಿ ಮತ್ತು ಶ್ರೀ ಗಣಪತಿ ಕಟ್ಟಿನಕೆರೆ, ತಹಶೀಲ್ದಾರ್, ಸಿದ್ದಾಪುರ ತಾಲ್ಲೂಕು, ಸಿದ್ದಾಪುರ – ಇವರ ವಿರುದ್ಧ ಜಂಟೀ ಇಲಾಖಾ ವಿಚಾರಣೆ – ವಿಚಾರಣಾಧಿಕಾರಿಯನ್ನು ಬದಲಾಯಿಸಿ ನೇಮಿಸುವ ಬಗ್ಗೆ.

**ಓದಲಾಗಿದೆ :** 1. ದಿನಾಂಕ 05–10–2010 ರ ಆದೇಶ ಸಂಖ್ಯೆ ಸಿಆಸುಇ 012 ಕೆಇವಿ 10.

2. ಶ್ರೀ ಎಸ್. ಟಿ. ಮೋಹನರಾಜು, ಕೆಎಎಸ್ (ಕಿರಿಯ ಶ್ರೇಣಿ) ಇವರ ದಿನಾಂಕ 25–10–2010 ರ ಮನವಿ.

**ಪ್ರಸ್ತಾವನೆ :**

ಶ್ರೀ ಎಸ್.ಟಿ. ಮೋಹನರಾಜು, ಕೆಎಎಸ್ (ಕಿರಿಯ ಶ್ರೇಣಿ, ಇವರು ಉಪ ವಿಭಾಗಾಧಿಕಾರಿ ಶಿರಸಿ ಉಪ ವಿಭಾಗ, ಶಿರಸಿ ಉಪ ವಿಭಾಗ, ಶಿರಸಿ ಹಾಗೂ ಸಹಾಯಕ ಚುನಾವಣಾಧಿಕಾರಿ, ಸಂಖ್ಯೆ 12 – ಉತ್ತರ ಕನ್ನಡ ಲೋಕಸಭಾ ಕ್ಷೇತ್ರ ಹುದ್ದೆಯಲ್ಲಿ ಮತ್ತು ಶ್ರೀ ಗಣಪತಿ ಕಟ್ಟಿನಕೆರೆ ಇವರು ತಹಶೀಲ್ದಾರ್, ಸಿದ್ದಾಪುರ ತಾಲ್ಲೂಕು, ಸಿದ್ದಾಪುರ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ದಿನಾಂಕ 10–04–2009 ರ ಮಧ್ಯಾಹ್ನ 12–00 ಗಂಟೆಗೆ ಸಿದ್ದಾಪುರ ತಾಲ್ಲೂಕು ಹಲಗೇರಿ ಪಂಚಾಯತ್ ವ್ಯಾಪ್ತಿಯಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಪಕ್ಷದ ವತಿಯಿಂದ ನಡೆದ ಸಭೆಯಲ್ಲಿ ಹಾಜರಿದ್ದ ಸಾರ್ವಜನಿಕರಿಗೆ ಊಟ ವಗೈರೆ ನೀಡಿ ಪ್ರಭಾವ ಬೀರುತ್ತಿರುವುದಾಗಿ ದೂರವಾಣಿ ಮೂಲಕ ಸ್ವೀಕರಿಸಲಾದ ದೂರಿನ ಬಗ್ಗೆ ಸ್ಥಳಕ್ಕೆ ಭೇಟಿ ನೀಡಿ ವಾಸ್ತವಾಂಶವನ್ನು ಚಿತ್ರೀಕರಿಸಿ, ಸಿ ಡಿ ರೂಪದಲ್ಲಿ ವರದಿ ನೀಡುವಂತೆ ಶ್ರೀ ಡಿ.ಕೆ. ತಿವಾರಿ, ಜಿ 2616, ಚುನಾವಣಾ ವೀಕ್ಷಕರು, ಸಂಖ್ಯೆ 12–ಉತ್ತರ ಕನ್ನಡ ಲೋಕಸಭಾ ಕ್ಷೇತ್ರ ಇವರು ಸೂಚಿಸಿದ್ದರೂ ಸಹ, ಶ್ರೀ ಮೋಹನರಾಜು ರವರು ದಿನಾಂಕ 11–4–2009 ರಂದು ಚುನಾವಣಾ ವೀಕ್ಷಕರಿಗೆ ನೀಡಿದ ಚಿತ್ರೀಕರಿಸಿದ ಸಿ ಡಿ ಯು ದೋಷಪೂರಿತವಾಗಿದ್ದು, ಇದರಿಂದ ಯಾವುದೇ ವಿವರ ಲಭ್ಯವಾಗದೇ, ಇದು ಉದ್ದೇಶಪೂರ್ವಕವಾಗಿ ಮಾಡಿದ ಕೃತ್ಯವಾಗಿದ್ದು, ಇದರಿಂದಾಗಿ, ಶ್ರೀ ಮೋಹನರಾಜು ಮತ್ತು ಶ್ರೀ ಗಣಪತಿ ಕಟ್ಟಿನಕೆರೆ ರವರುಗಳು ರಾಜಕೀಯ ಪಕ್ಷವೊಂದಕ್ಕೆ ಪರೋಕ್ಷವಾಗಿ ಸಹಕಾರ ನೀಡಿ ಚುನಾವಣಾ ನೀತಿ ಸಂಹಿತೆಯನ್ನು ಜಾರಿಗೊಳಿಸುವಲ್ಲಿ ವಿಫಲರಾಗಿರುವ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ, ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ, ಕಾರವಾರ ರವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಉಪ ವಿಭಾಗಾಧಿಕಾರಿಗಳು, ಶಿರಸಿ ಉಪ ವಿಭಾಗ, ಶಿರಸಿ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ, ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ಆದೇಶ ಹೊರಡಿಸಲಾಗಿದೆ.

ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ ಇವರು ಈ ಪ್ರಕರಣದ ಆರೋಪಿತ ಅಧಿಕಾರಿಗಳ ವಿರುದ್ಧದ ಶಿಸ್ತು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಕಳುಹಿಸಿದ್ದು, ಇವರನ್ನೇ ಈ ಜಂಟೀ ಇಲಾಖಾ ವಿಚಾರಣೆಯ ವಿಚಾರಣಾಧಿಕಾರಿಯನ್ನಾಗಿ ನೇಮಿಸಿರುವುದರಿಂದ, ಇವರಿಂದ ನಿಷ್ಪಕ್ಷಪಾತವಾದ ವಿಚಾರಣೆ ಹಾಗೂ ನ್ಯಾಯ ದೊರೆಯಲಾರದೆಂಬುದಾಗಿ ಶ್ರೀ ಎಸ್. ಟಿ. ಮೋಹನರಾಜು, ಕೆಎಎಸ್ (ಕಿರಿಯ ಶ್ರೇಣಿ) ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ಮನವಿ ಮಾಡಿರುತ್ತಾರೆ. ಸರ್ಕಾರವು ಇವರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 012 ಕೆಇವಿ 2010, ಬೆಂಗಳೂರು, ದಿನಾಂಕ : 22ನೇ ನವೆಂಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957 ರ ನಿಯಮ 13 ನ್ನು ಓದಿಕೊಂಡಂತೆ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು, ಶ್ರೀ ಎಸ್.ಟಿ. ಮೋಹನರಾಜು, ಕೆಎಎಸ್ (ಕಿರಿಯ ಶ್ರೇಣಿ), ಹಿಂದಿನ ಉಪ ವಿಭಾಗಾಧಿಕಾರಿ, ಶಿರಸಿ ಹಾಲಿ ವಿಶೇಷ ಭೂ ಸ್ವಾಧೀನಾಧಿಕಾರಿ ರಾಷ್ಟ್ರೀಯ ಹೆದ್ದಾರಿ, ಧಾರವಾಡ ಮತ್ತು ಶ್ರೀ ಗಣಪತಿ ಕಟ್ಟಿನಕೆರೆ, ತಹಶೀಲ್ದಾರ್, ಸಿದ್ದಾಪುರ ತಾಲ್ಲೂಕು, ಸಿದ್ದಾಪುರ, ಉತ್ತರ ಕನ್ನಡ ಜಿಲ್ಲೆ ಇವರುಗಳ ವಿರುದ್ಧ ಮಾಡಲಾದ ಆರೋಪಗಳ ಕುರಿತಂತೆ ಜಂಟಿ ವಿಚಾರಣೆ ನಡೆಸಲು ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರ ಬದಲಿಗೆ ಪ್ರಾದೇಶಿಕ ಆಯುಕ್ತರು ಬೆಳಗಾವಿ ವಿಭಾಗ, ಬೆಳಗಾವಿ ರವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಉಪ ವಿಭಾಗಾಧಿಕಾರಿಗಳು, ಶಿರಸಿ ಉಪ ವಿಭಾಗ, ಶಿರಸಿ ಇವರು ಮಂಡನಾಧಿಕಾರಿಯಾಗಿ ಮುಂದುವರಿಯುತ್ತಾರೆ.

ವಿಚಾರಣೆಯನ್ನು ಆದಷ್ಟು ತ್ವರಿತವಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**(ಎಂ. ವಾಸುದೇವಮೂರ್ತಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–2)

ಪಿ. ಆರ್. 2902

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಬಿ.ಕೆ. ಧನಂಜಯ, ದ್ವಿ.ದ.ಸ. ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ :**
1. ದೋಷಾರೋಪಣಾ ಪಟ್ಟಿ ದಿನಾಂಕ 18–11–2008.
2. ದೋಷಾರೋಪಣೆಗೆ ಸಮಜಾಯಿಷಿ ದಿನಾಂಕ 26–11–2008.
3. ಶಿಸ್ತು ಪ್ರಾಧಿಕಾರಿಯವರು ಹೊರಡಿಸಿದ ಅಂತಿಮ ಆದೇಶ ಸಂಖ್ಯೆ: ಡಿಇ 2/132/ಸಿಓಪಿ/ಲಿಪಿಕ/2008, ದಿನಾಂಕ 05–02–2008.
4. ಶ್ರೀ ಬಿ.ಕೆ. ಧನಂಜಯ, ದ್ವಿ.ದ.ಸ. ರವರ ಮೇಲ್ಮನವಿ ಅರ್ಜಿ ದಿನಾಂಕ 19–02–2009.
5. ಮೇಲ್ಮನವಿ ಪ್ರಾಧಿಕಾರಗಳ ಆದೇಶ ಸಂಖ್ಯೆ: ಅಪೀಲು (4) 11/2008–09 ದಿನಾಂಕ 30–04–2009.
6. ಪರಿಷ್ಕರಣ ಮೇಲ್ಮನವಿ ದಿನಾಂಕ 07–12–2009.
7. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 59 ಸಿಎನ್‌ಎಸ್ 10 ದಿನಾಂಕ 09–07–2010.

**ಪ್ರಸ್ತಾವನೆ :**

ಶ್ರೀ ಬಿ.ಕೆ. ಧನಂಜಯ, ದ್ವಿ.ದ.ಸ. ರವರ ಪೊಲೀಸ್ ಕಮೀಷನರ್ ರವರ ಕಛೇರಿ, ಬೆಂಗಳೂರು ನಗರ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ 01–11–2008 ರಂದು ಅಪರ ಪೊಲೀಸ್ ಕಮೀಷನರ್ (ಆಡಳಿತ) ರವರಿಗೆ "ಬಾಸ್" ಎಂಬ ಪದವನ್ನು ಬಳಸಿ ಮಾತನಾಡಿದ್ದರಿಂದ ಪೊಲೀಸ್ ಕಮೀಷನರ್, ಬೆಂಗಳೂರು ನಗರ ರವರು ಸದರಿಯವರ ವಿರುದ್ಧ ಕೆ.ಸಿ.ಎಸ್. (ಸಿ.ಸಿ.ಎ) ನಿಯಮ 1957ರ ನಿಯಮ 12ರ ಅಡಿಯಲ್ಲಿ ದಿನಾಂಕ 18–11–2008 ರಂದು ದೋಷಾರೋಪಣಾ ಪತ್ರವನ್ನು ಹೊರಡಿಸಿರುತ್ತಾರೆ.

**ದೋಷಾರೋಪಣೆ:**

ಶ್ರೀ ಬಿ.ಕೆ. ಧನಂಜಯ, ದ್ವಿ.ದ.ಸ. ಪೊಲೀಸ್ ಕಮೀಷನರ್ ರವರ ಕಛೇರಿ, ಬೆಂಗಳೂರು ನಗರ ಆದ ನೀವು ಲೆಕ್ಕ–4 ಶಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ದಿನಾಂಕ 01–11–2008 ರಂದು ಬೆಳಿಗ್ಗೆ 11–00 ಘಂಟೆ ಸಮಯದಲ್ಲಿ ಅಪರ ಪೊಲೀಸ್ ಕಮೀಷನರ್, ಆಡಳಿತ, ಬೆಂಗಳೂರು ನಗರ ರವರ ಕಛೇರಿ ಕೊಠಡಿಯಲ್ಲಿ ನಿಮ್ಮ ಶಾಖೆಗೆ ಸಂಬಂಧಿಸಿದ ಕಡತಗಳನ್ನು ಪರಿಶೀಲಿಸುವ ಸಮಯದಲ್ಲಿ ನಿಮ್ಮ ಹಿರಿಯ ಅಧಿಕಾರಿಯಾದ ಅಪರ ಪೊಲೀಸ್ ಕಮೀಷನರ್, ಆಡಳಿತ ರವರಿಗೆ ಬಾಸ್ ಎಂಬ ಪದ ಬಳಸಿ ಮಾತನಾಡಿರುತ್ತೀರಿ. ಈ ರೀತಿಯಾಗಿ ಒಬ್ಬ ಜವಾಬ್ದಾರಿಯುತ ಶಿಸ್ತಿನ ಇಲಾಖೆಯ ನೌಕರರಾದ ನೀವು ನಿಮ್ಮ ಹಿರಿಯ ಅಧಿಕಾರಿಗಳೊಂದಿಗೆ ಯಾವ ರೀತಿ ಮಾತನಾಡಬೇಕೆಂಬ ಪರಿಜ್ಞಾನವಿಲ್ಲದೆ ವರ್ತಿಸಿ, ನಿಮ್ಮ ನಡತೆಯಲ್ಲಿ ತೀವ್ರ ದುರ್ನಡತೆ ಪ್ರದರ್ಶಿಸಿರುತ್ತೀರಿ."

ದೋಷಾರೋಪಣಾ ಪತ್ರಕ್ಕೆ ಸದರಿಯವರು ಸಲ್ಲಿಸಿದ ಸಮಜಾಯಿಷಿಯು ಸಮಂಜಸವಾಗಿಲ್ಲವಾದ ಕಾರಣ ಪೊಲೀಸ್ ಕಮೀಷನರ್, ಬೆಂಗಳೂರು ನಗರ ರವರು ಸದರಿಯವರಿಗೆ "ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಒಂದು ವರ್ಷ ಕಾಲ ಮುಂದೂಡಲಾಗಿದೆ" ಎಂದು ಆದೇಶಿಸಿರುತ್ತಾರೆ.

ಸದರಿ ಆದೇಶದ ವಿರುದ್ಧ ಶ್ರೀ ಬಿ.ಕೆ. ಧನಂಜಯ, ದ್ವಿ.ದ.ಸ. ರವರು ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿಯಲ್ಲಿನ ವಿವಾದಾಂಶಗಳಿಗೆ ಶಿಸ್ತು ಪ್ರಾಧಿಕಾರಿಗಳಾದ ಪೊಲೀಸ್ ಕಮೀಷನರ್, ಬೆಂಗಳೂರು ನಗರ ರವರು ಆಪಾದನೆಗೆ ತಕ್ಕಂತೆ ಶಿಕ್ಷೆ ವಿಧಿಸಿದ್ದು ಅದನ್ನು ಪುಷ್ಟೀಕರಿಸಿ ಅವರ ಮೇಲ್ಮನವಿ ಅರ್ಜಿಯನ್ನು ದಿನಾಂಕ 30–04–2009 ರಂದು ತಿರಸ್ಕರಿಸಿರುತ್ತಾರೆ.

ಮೇಲೆ ಉಲ್ಲೇಖಿಸಿರುವ ಎರಡು ಆದೇಶಗಳ ವಿರುದ್ಧ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಮೇಲೆ ಓದಲಾದ (6) ರಲ್ಲಿ ಸಲ್ಲಿಸಲಾಗಿರುತ್ತದೆ.

ಶ್ರೀ ಬಿ.ಕೆ. ಧನಂಜಯ, ದ್ವಿ.ದ.ಸ. ಸಿ.ಓ.ಪಿ. ಕಛೇರಿ, ಬೆಂಗಳೂರು ರವರು ತಮ್ಮ ಪರಿಷ್ಕರಣ ಮೇಲ್ಮನವಿಯಲ್ಲಿ ತಮ್ಮ ಹಿರಿಯ ಅಧಿಕಾರಿಯರವರನ್ನು ಬಾಸ್ ಎಂಬ ಪದ ಬಳಸಿ ಮಾತನಾಡಿರುವುದನ್ನು ಒಪ್ಪಿಕೊಂಡಿರುತ್ತಾರೆ. ಹಾಗೂ ತಾವು ದ್ವಿ.ದ.ಸ. ಕೆಳದರ್ಜೆಯ ಗುಮಾಸ್ತನಾಗಿರುತ್ತೇನೆ ಹಾಗೂ ದೋಷಾರೋಪಣೆಯಲ್ಲಿ ನಮೂದಿಸಿರುವ ಬಾಸ್ ಎಂಬ ಪದಕ್ಕೆ ಬೇರಾವುದೇ ಅರ್ಥಕೊಡುವ (ಉದ್ರೇಕ) ಪದ CHAMBERS 21ST Century Dictionary ನಲ್ಲಿ ಇರುವುದಿಲ್ಲವೆಂದೂ, ತನ್ನ 15 ವರ್ಷಗಳ ಕಳಂಕರಹಿತ ಸೇವೆಯಲ್ಲಿ ಮೊದಲಬಾರಿ ದಂಡನೆಗೆ ಗುರಿಯಾಗಿದ್ದು ತನ್ನ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ ತಮಗೆ ವಿಧಿಸಿರುವ ದಂಡನೆಯಿಂದ ಮುಕ್ತಿಗೊಳಿಸಬೇಕೆಂದು ಕೋರಲಾಗಿರುತ್ತದೆ.

ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಶಿಸ್ತು ಪ್ರಾಧಿಕಾರವು ಹೊರಡಿಸಿರುವ ದಂಡನಾ ಆದೇಶವನ್ನು ಭಾಗಶಃ ಪರಿಷ್ಕರಿಸಲು ನಿರ್ಣಯಿಸಿ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ಮೇಲೆ ಓದಲಾದ (7)ರ ಪತ್ರದಲ್ಲಿ ಪಡೆಯಲಾಗಿರುತ್ತದೆ, ಆದರನ್ವಯ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 2 ಪೊಸಿಲಿ 2010 ಬೆಂಗಳೂರು, ದಿನಾಂಕ : 23ನೇ ನವೆಂಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957 ರ ನಿಯಮ 26 (ಎ) ರ ಪ್ರಕಾರ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಬಿ.ಕೆ.ಧನಂಜಯ, ದ್ವಿ.ದ.ಸ. ಇವರಿಗೆ ವಿಧಿಸಲಾಗಿದ್ದ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಅವರ ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಒಂದು ವರ್ಷ ಕಾಲ ಮುಂದೂಡಲಾಗಿದ್ದ ದಂಡನೆಯನ್ನು ಭಾಗಶಃ ಮಾರ್ಪಡಿಸಿ ಕೆ.ಸಿ.ಎಸ್ (ಸಿ.ಸಿ.ಎ) ನಿಯಮಗಳ ನಿಯಮ 8(ii) ರನ್ವಯ "ವಾಗ್ದಂಡನೆ" ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**(ಟಿ.ಎನ್. ರವಿಪ್ರಕಾಶ್)**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ. ಆರ್. 2903

## ಕಂದಾಯ ಸಚಿವಾಲಯ

**ವಿಷಯ** : ಆಸರೆ ಯೋಜನೆಯಡಿಯಲ್ಲಿ ಮನೆಗಳ ನಿರ್ಮಾಣಕ್ಕಾಗಿ ಕರ್ನಾಟಕ ರೂರಲ್ ಇನ್‌ಫ್ರಾಸ್ಟ್ರಕ್ಚರ್ ಡೆವಲಪ್‌ಮೆಂಟ್ ಲಿ., ಇವರಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** : ಮಾನ್ಯ ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ: ಮುಮಕಾ/6832/ 2010, ದಿನಾಂಕ: 19–11–2010.

**ಪ್ರಸ್ತಾವನೆ :**

ಮೇಲೆ ಓದಲಾದ ಮಾನ್ಯ ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿಯಂತೆ ಕರ್ನಾಟಕ ರೂರಲ್ ಇನ್‌ಫ್ರಾಸ್ಟ್ರಕ್ಚರ್ ಡೆವಲಪ್‌ಮೆಂಟ್ ಲಿ., ಬೆಂಗಳೂರು ಇವರು ನೆರೆಪೀಡಿತ ಜಿಲ್ಲೆಗಳಲ್ಲಿ, ಆಸರೆ ಯೋಜನೆಯಡಿಯಲ್ಲಿ 12525 ಮನೆಗಳನ್ನು ಕಟ್ಟಲು ಉದ್ದೇಶಿಸಿದ್ದು, ಈಗಾಗಲೇ ರೂ. 60–00 ಕೋಟಿಗಳನ್ನು ಸರ್ಕಾರದಿಂದ ಬಿಡುಗಡೆ ಮಾಡಲಾಗಿದೆಯೆಂದು ಮನೆಗಳ ನಿರ್ಮಾಣ ಕಾರ್ಯ ಪ್ರಗತಿಯಲ್ಲಿರುವುದರಿಂದ ಈ ಸಂಬಂಧ ರೂ. 20.00 ಕೋಟಿಗಳ ಅನುದಾನ ಬಿಡುಗಡೆ ಮಾಡಲು ಕೋರಿರುತ್ತಾರೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರ ರೂ. 20.00 ಕೋಟಿಗಳನ್ನು ಆಸರೆ ಯೋಜನೆಯಡಿಯಲ್ಲಿ ಬಿಡುಗಡೆ ಮಾಡಲು ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 174 ಟಿಎನ್‌ಆರ್ 2010, ಬೆಂಗಳೂರು, ದಿನಾಂಕ: 27–11–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ರೂರಲ್ ಇನ್‌ಫ್ರಾಸ್ಟ್ರಕ್ಚರ್ ಡೆವಲಪ್‌ಮೆಂಟ್ ಲಿ., ಬೆಂಗಳೂರು ಇವರಿಗೆ ನೆರೆ ಪೀಡಿತ ಜಿಲ್ಲೆಗಳಲ್ಲಿ ಆಸರೆ ಯೋಜನೆಯಡಿಯಲ್ಲಿ ಮನೆಗಳನ್ನು ನಿರ್ಮಾಣ ಮಾಡಲು ರೂ. 20.00 ಕೋಟಿ (ರೂಪಾಯಿ ಇಪ್ಪತ್ತು ಕೋಟಿಗಳು ಮಾತ್ರ) ಗಳ ಅನುದಾನವನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಮೇಲಿನಂತೆ ಬಿಡುಗಡೆ ಮಾಡಿರುವ ಮೊತ್ತವನ್ನು ಲೆಕ್ಕ ಶೀರ್ಷಿಕೆ 8235-00-111-0-02 "Public Contributions to the Calamity Relief ಅಡಿಯಲ್ಲಿ ಸಂಬಂಧಿಸಿದ ಸಂಸ್ಥೆಯ ಮುಖ್ಯಸ್ಥರು ಅನುದಾನ ಬಿಲ್ಲು (Payees Receipt) ತಯಾರಿಸಿ, ಸರ್ಕಾರದ ಕಾರ್ಯದರ್ಶಿಗಳು, (ವಿಪತ್ತು ನಿರ್ವಹಣೆ) ಕಂದಾಯ ಇಲಾಖೆ ಇವರಿಂದ ಮೇಲು ಸಹಿ ಪಡೆದು ಖಜಾನೆಯಿಂದ ಡ್ರಾ ಮಾಡಲು ಸೂಚಿಸಿದೆ. ಕರ್ನಾಟಕ ರೂರಲ್ ಇನ್‌ಫ್ರಾಸ್ಟ್ರಕ್ಚರ್ ಡೆವಲಪ್‌ಮೆಂಟ್ ಲಿ., ಬೆಂಗಳೂರು ಇವರು ಈ ಹಿಂದೆ ಬಿಡುಗಡೆ ಮಾಡಿದ್ದ ಅನುದಾನಕ್ಕೆ ಹಾಗೂ ಈಗ ಬಿಡುಗಡೆ ಮಾಡುತ್ತಿರುವ ಅನುದಾನಕ್ಕೆ ಹಣ ಬಳಕೆ ಪತ್ರವನ್ನು ವೆಚ್ಚದ ವಿವರಗಳೊಂದಿಗೆ ಸಲ್ಲಿಸುವುದು. ಹಾಗೂ ಭೌತಿಕ ಹಾಗೂ ಆರ್ಥಿಕ ಪ್ರಗತಿಯ ವಿವರಗಳನ್ನು ಸಹ ಸಲ್ಲಿಸುವುದು.

ಈ ಮೊತ್ತವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಉಪಯೋಗಿಸತಕ್ಕದ್ದು.

ಈ ಆದೇಶವನ್ನು ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿ ಸಂ: ಮುಮಕಾ/6832/2010, ದಿನಾಂಕ: 19-11-2010ರ ಆದೇಶದ ಪ್ರಕಾರ, ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಗಂಗಾಧರ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 2910 ಕಂದಾಯ ಇಲಾಖೆ (ವಿ.ನಿ. ಮತ್ತು ಸೇವೆಗಳು-2)

## ಕಂದಾಯ ಸಚಿವಾಲಯ

**ವಿಷಯ** : ಶ್ರೀ ಬಿ.ಟಿ. ಗೋವಿಂದಮರಿಗೌಡ, ಹಿಂದಿನ ತಹಶೀಲ್ದಾರ್, ಹೊಸಕೋಟೆ ತಾಲ್ಲೂಕು ಬೆಂಗಳೂರು ಗ್ರಾಮಾಂತರ ಜಿಲ್ಲೆ (ಹಾಲಿ ನಿವೃತ್ತರು) ಮತ್ತಿತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಕುರಿತು- ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ** :

1. ಸರ್ಕಾರದ ಆದೇಶ ಸಂಖ್ಯೆ: ಕಂಇ 48 ಎಡಿಇ 2001 ದಿನಾಂಕ: 22-4-2002.
2. ಸರ್ಕಾರದ ಆದೇಶ ಸಂಖ್ಯೆ: ಕಂಇ 48 ಎಡಿಇ 2001 ದಿನಾಂಕ: 1-6-2002.
3. ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ಪತ್ರ ಸಂಖ್ಯೆ: ಇಎಸ್‌ಟಿ/2/ಸಿಆರ್/30-99/2000 ದಿನಾಂಕ: 21-5-2002.
4. ಸರ್ಕಾರದ ಕಾರಣ ಕೇಳುವ ನೋಟೀಸು ಸಂಖ್ಯೆ: ಕಂಇ 48 ಇಡಿಇ 2001, ದಿನಾಂಕ: 18-7-2002.
5. ಲಿಖಿತ ಹೇಳಿಕೆ:
    1. ಶ್ರೀ ಎಂ. ಮೊಹಮ್ಮದ್ ಸಿಬ್ಗತುಲ್ಲಾ, ದ್ವಿ.ದ.ಸ. ದಿನಾಂಕ: 28-8-2002.
    2. ಶ್ರೀ ಬಿ.ಟಿ. ಗೋವಿಂದಮರಿಗೌಡ, ತಹಶೀಲ್ದಾರ್,(ನಿವೃತ್ತ) ದಿ: 4-9-2002
    3. ಶ್ರೀ ಎಂ. ನಾಗೇಶ್, ದ್ವಿ.ದ.ಸ. ದಿನಾಂಕ: 31-8-2002.
    4. ಶ್ರೀ ಹೆಚ್.ಎನ್. ರಾಮಚಂದ್ರಯ್ಯ, ಹಿಂದಿನ ಶಿರಸ್ತೇದಾರ್ ದಿನಾಂಕ: 25-9-2002.
6. ಸರ್ಕಾರದ ಆದೇಶ ಸಂಖ್ಯೆ: ಕಂಇ 48 ಎಡಿಇ 2001 ದಿನಾಂಕ: 19-12-2003.
7. ಸರ್ಕಾರದ ಆದೇಶ ಸಂಖ್ಯೆ: ಕಂಇ 48 ಎಡಿಇ 2001 ದಿನಾಂಕ: 27-12-2005.
8. ಎನ್.ಎನ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸತ್ರನ್ಯಾಯಾಧೀಶರು, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ವಿಚಾರಣಾ ವರದಿ ದಿನಾಂಕ: 26-4-2007.
9. ಸರ್ಕಾರದ ಪತ್ರ ಸಂಖ್ಯೆ: ಕಂಇ 38 ಎಡಿಇ 2004 ದಿನಾಂಕ: 12-6-2007.
10. ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ಪತ್ರ ಸಂಖ್ಯೆ: ಇಎಸ್‌ಟಿ/2/ಸಿಸಿಎ/ಸಿಆರ್/30-99/2000 ದಿನಾಂಕ : 17-5-2010.

**ಪ್ರಸ್ತಾವನೆ :**

ಹೊಸಕೋಟೆ ತಾಲ್ಲೂಕಿನ ನೊಂದ ಸಂತ್ರಸ್ಥರು ಮಾನ್ಯ ಮುಖ್ಯಮಂತ್ರಿಯವರಿಗೆ ದಿನಾಂಕ: 9-7-99 ರಂದು 1998ನೇ ಸಾಲಿನಲ್ಲಿ ಹೊಸಕೋಟೆ ತಾಲ್ಲೂಕಿನಲ್ಲಿ ಭಾರಿ ಮಳೆಯಿಂದ ಉಂಟಾದ ನಷ್ಟಕ್ಕೆ ಪರಿಹಾರ ಮಂಜೂರು ಮಾಡುವಲ್ಲಿ ಹೊಸಕೋಟೆ ತಾಲ್ಲೂಕು ತಹಶೀಲ್ದಾರರು ಮತ್ತು ಅವರ ಕಛೇರಿಯ ಇತರೆ ಸಿಬ್ಬಂದಿಗಳು ಹಣ ದುರುಪಯೋಗ ಪಡಿಸಿಕೊಂಡಿರುವರೆಂದು ದೂರು ಮನವಿ ಸಲ್ಲಿಸಿದ್ದರ ಮೇರೆಗೆ ಮೇಲೆ ಓದಲಾದ ಕ್ರಮ ಸಂಖ್ಯೆ: (1) ರ ಸರ್ಕಾರದ ದಿನಾಂಕ: 22-4-2002 ರ ಆದೇಶದಲ್ಲಿ 1957ರ ಕ.ನಾ.ಸೇ. (ವ.ನಿ. ಮತ್ತು ಮೇ) ನಿಯಮಗಳನ್ವಯ ಶ್ರೀ ಬಿ.ಟಿ. ಗೋವಿಂದಮರಿಗೌಡ, ಹಿಂದಿನ ತಹಶೀಲ್ದಾರ್, ಹೊಸಕೋಟೆ ಪ್ರಸ್ತುತ ನಿವೃತ್ತರು ಹಾಗೂ ಶ್ರೀ ಹೆಚ್.ಎನ್. ರಾಮಚಂದ್ರಯ್ಯ, ಹಿಂದಿನ ಶಿರಸ್ತೇದಾರ್, ಹೊಸಕೋಟೆ ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತಿನಲ್ಲಿಟ್ಟು ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ : (2)ರ ಸರ್ಕಾರದ ದಿನಾಂಕ: 1–6–2002 ರ ಆದೇಶದಲ್ಲಿ ಶ್ರೀ ಬಿ.ಟಿ. ಗೋವಿಂದಮರಿಗೌಡ ಹಿಂದಿನ ತಹಶೀಲ್ದಾರ್, ಹೊಸಕೋಟೆ ಹಾಗೂ ಶ್ರೀ ಹೆಚ್.ಎನ್. ರಾಮಚಂದ್ರಯ್ಯ, ಹಿಂದಿನ ಶಿರಸ್ತೇದಾರ್ ಇವರುಗಳ ವಿರುದ್ಧದ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಮಾನತ್ತಿನಿಂದ ಬಿಡುಗಡೆ ಮಾಡಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (3)ರ ದಿನಾಂಕ : 21–5–2002ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ರವರು ಶ್ರೀ ಬಿ.ಟಿ. ಗೋವಿಂದಮರಿಗೌಡ, ಹಿಂದಿನ ತಹಶೀಲ್ದಾರ್, ಹೊಸಕೋಟೆ (ಪ್ರಸ್ತುತ ನಿವೃತ್ತರು) ಹಾಗೂ ಶ್ರೀ ಹೆಚ್.ಎನ್. ರಾಮಚಂದ್ರಯ್ಯ, ಹಿಂದಿನ ಶಿರಸ್ತೇದಾರ್, ಹೊಸಕೋಟೆ ಇವರುಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಕುರಿತಂತೆ, ಕರಡು ದೋಷಾರೋಪಣ ಪಟ್ಟಿಯನ್ನು (ಅನುಬಂಧ–1 ರಿಂದ 4) ದಾಖಲೆಗಳೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ ಪ್ರಕರಣಕ್ಕೆ ಸಂಬಂಧಿಸಿದಂತೆ, ಉಳಿದ ಗ್ರೂಪ್–ಸಿ ನೌಕರರಾದ ಶ್ರೀ ಕೆ.ಸಿ. ಸತೀಶ್, ಹಿಂದಿನ ದ್ವಿ.ದ.ಸ. ಇವರನ್ನು ಸೇವೆಯಿಂದ ಅಮಾನತ್ತುಗೊಳಿಸಲಾಗಿದ್ದು, ಶ್ರೀ ಎಂ. ನಾಗೇಶ್ ಮತ್ತು ಶ್ರೀ ಮಹಮ್ಮದ್ ಸಿಬ್ಗತುಲ್ಲಾ, ಹಿಂದಿನ ದ್ವಿ.ದ.ಸ. ಇವರುಗಳ ವಿರುದ್ಧ ಇಲಾಖಾ ವಿಚಾರಣೆ ಕಾಯ್ದಿರಿಸಿ ಸೇವೆಯಿಂದ ನಿಲಂಬನೆಗೊಳಿಸಲಾಗಿರುತ್ತದೆ ಹಾಗೂ ಶ್ರೀ ಆರ್. ಚಿನ್ನಸ್ವಾಮಿ ಗ್ರಾ. ಲೆ. ಇವರನ್ನು ಸೇವೆಯಿಂದ ಅಮಾನತ್ತುಗೊಳಿಸಲಾಗಿರುತ್ತದೆ ಎಂದು ಸಹ ತಿಳಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (4)ರ ದಿನಾಂಕ: 18–7–2002ರ ಕಾರಣ ಕೇಳುವ ನೋಟೀಸನ್ನು (1) ಶ್ರೀ ಬಿ.ಟಿ. ಗೋವಿಂದಮರಿಗೌಡ, ಹಿಂದಿನ ತಹಶೀಲ್ದಾರ್, ಹೊಸಕೋಟೆ (2) ಶ್ರೀ ಹೆಚ್.ಎನ್. ರಾಮಚಂದ್ರಯ್ಯ, ಹಿಂದಿನ ಶಿರಸ್ತೇದಾರ್, (3) ಶ್ರೀ ಕೆ.ಸಿ. ಸತೀಶ್, ಹಿಂದಿನ ದ್ವಿ.ದ.ಸ. (4) ಶ್ರೀ ಎಂ. ನಾಗೇಶ್ ಹಿಂದಿನ ದ್ವಿ.ದ.ಸ. (5) ಶ್ರೀ ಮೊಹಮ್ಮದ್ ಸಿಗ್ಬತುಲ್ಲಾ, ಹಿಂದಿನ ದ್ವಿ.ದ.ಸ. (6) ಶ್ರೀ ಆರ್. ಚಿನ್ನಸ್ವಾಮಿ, ಹಿಂದಿನ ಗ್ರಾ. ಲೆ ಇವರುಗಳಿಗೆ ಜಿಲ್ಲಾಧಿಕಾರಿಗಳು ಕಳುಹಿಸಿರುವ ದೋಷಾರೋಪಣೆ ಪಟ್ಟಿಯ ಅನುಬಂಧ 1 ರಿಂದ 4 ಗಳನ್ನು ಜಾರಿಗೊಳಿಸಿ, ಸದರಿ ನೋಟೀಸು ಸ್ವೀಕರಿಸಿದ 15 ದಿನಗಳೊಳಗೆ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ತಪ್ಪಿದಲ್ಲಿ ನಿಮ್ಮ ಪ್ರತಿವಾದವೇನೂ ಇಲ್ಲವೆಂದು ಭಾವಿಸಿ, ಕ.ನಾ.ಸೇ. (ವ. ನಿ. ಮತ್ತು ಮೇ) ನಿಯಮ 1957 ರ ನಿಯಮ 11ನೇ ಮೇರೆಗೆ ಅವರ ಮೇಲೆ ಏಕಪಕ್ಷೀಯವಾಗಿ ಮುಂದಿನ ಕ್ರಮ ತೆಗೆದುಕೊಳ್ಳಲಾಗುವುದು ಎಂದು ತಿಳಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (5)ರಲ್ಲಿ ಓದಲಾದ 4 ಮಂದಿ ಅಧಿಕಾರಿ/ನೌಕರರು ಮಾತ್ರ ತಮ್ಮ ತಮ್ಮ ಲಿಖಿತ ಸಮಜಾಯಿಷಿಯನ್ನು ಸಲ್ಲಿಸಿದ್ದು, ಅವರುಗಳ ವಿರುದ್ಧದ ಆರೋಪಗಳನ್ನು ಅಲ್ಲಗಳೆದಿರುತ್ತಾರೆ ಹಾಗೂ ಉದ್ದೇಶಿತ ವಿಚಾರಣೆಯನ್ನು ಕೈಬಿಡುವಂತೆ ಕೋರಿರುತ್ತಾರೆ. ಈ ಪ್ರಕರಣದಲ್ಲಿ ಇನ್ನಿಬ್ಬರು ಆಪಾದಿತ ನೌಕರರಾದ ಶ್ರೀ ಕೆ.ಸಿ. ಸತೀಶ್, ಹಿಂದಿನ ದ್ವಿ.ದ.ಸ. ಮತ್ತು ಶ್ರೀ ಚಿನ್ನಸ್ವಾಮಿ, ಹಿಂದಿನ ದ್ವಿ.ದ.ಸ. ಇವರುಗಳಿಗೆ ಜಾರಿಗೊಳಿಸಲಾಗಿದ್ದ ಆರೋಪಗಳ ಬಗ್ಗೆ ಲಿಖಿತ ಉತ್ತರ ಸಲ್ಲಿಸಲು ಅವರುಗಳಿಗೆ ನೀಡಲಾಗಿದ್ದ ಸಮಯಾವಕಾಶ ಮುಗಿದ ನಂತರವೂ ಸಹ ಇಂದಿನವರೆಗೂ ಅವರುಗಳು ಲಿಖಿತ ಹೇಳಿಕೆಯನ್ನು ಸರ್ಕಾರಕ್ಕೆ ಸಲ್ಲಿಸಿರುವುದಿಲ್ಲ. ಆಪಾದಿತ ಸಲ್ಲಿಸಿರುವ ಲಿಖಿತ ಸಮಜಾಯಿಷಿಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಪ್ರಕರಣದಲ್ಲಿ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಸರ್ಕಾರವು ತೀರ್ಮಾನಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ: (6) ರ ದಿನಾಂಕ: 19–12–2003 ರ ಸರ್ಕಾರದ ಆದೇಶದಲ್ಲಿ ಶ್ರೀ ಎಸ್.ವಿ. ತಿಲ್‍ಗುಲ್ ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶ ಹೊರಡಿಸಲಾಗಿತ್ತು.

ಶ್ರೀ ಎಸ್.ವಿ. ತಿಲ್‍ಗುಲ್ ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ರವರು ಯಾವುದೇ ಕಾರಣ ನೀಡದೆ ಎರಡು ವರ್ಷಗಳು ಕಳೆದರೂ ವಿಚಾರಣೆಯನ್ನು ಪ್ರಾರಂಭಿಸಿರುವುದಿಲ್ಲ ಹಾಗೂ ಆ ಬಗ್ಗೆ ಅವರನ್ನು ಅನೇಕ ಬಾರಿ ಸರ್ಕಾರಿ ಪತ್ರಗಳ ಮೂಲಕ ಸಂಪರ್ಕಿಸಿದರೂ ಸಹ ಅದಕ್ಕೆ ಯಾವುದೇ ಪ್ರತ್ಯುತ್ತರವನ್ನು ಸಹ ನೀಡಿರುವುದಿಲ್ಲ. ಈ ಹಿನ್ನೆಲೆಯಲ್ಲಿ, ಪ್ರಕರಣದಲ್ಲಿ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಮೇಲೆ ಓದಲಾದ ಕ್ರಮ ಸಂಖ್ಯೆ: (7) ರ ದಿನಾಂಕ: 27–12–2005 ರ ಸರ್ಕಾರದ ಆದೇಶದಲ್ಲಿ ಶ್ರೀ ಎಸ್.ವಿ. ತಿಲ್‍ಗುಲ್ ಇವರ ಬದಲಿಗೆ ಶ್ರೀ ಎನ್.ಎನ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (8) ರ ದಿನಾಂಕ: 26–4–2007 ರ ವಿಚಾರಣಾ ವರದಿಯಲ್ಲಿ, 1998 ರಲ್ಲಿ ಭಾರಿ ಮಳೆಯಿಂದಾಗಿ ಉಂಟಾದ ನಷ್ಟಕ್ಕೆ ಪರಿಹಾರ ನೀಡುವಲ್ಲಿ ಆಪಾದಿತರು ಹಣದ ದುರುಪಯೋಗಪಡಿಸಿಕೊಂಡಿರುತ್ತಾರೆ ಎನ್ನುವುದು ಸಂಕ್ಷಿಪ್ತವಾಗಿ ಹೇಳಬಹುದಾದ ಆಪಾದನೆ ಆಗಿರುತ್ತದೆ. ಆಪಾದಿತರ ವಾದದಂತೆ ಯಾವ ಹಣದ ದುರುಪಯೋಗ ಆಗಿಲ್ಲ. ಅದು ಏನೇ ಇದ್ದರೂ ಮಾಡಲಾದ ಆಪಾದನೆಯನ್ನು ಕೊನೆಯ ಪಕ್ಷ ಸಂಭವನೀಯವಾಗಿರುತ್ತದೆ ಎನ್ನುವ ಬಗ್ಗೆಯಾದರೂ ಅಲ್ಪಸ್ವಲ್ಪವಾದರೂ ಸಾಕ್ಷ್ಯ ಇರಬೇಕು. ಅಂಥ ಯಾವ ಸಾಕ್ಷ್ಯವೂ ಇಲ್ಲವೇ ಇಲ್ಲ. ಫಲಾನುಭವಿಗಳು ತಮಗೆ ಪರಿಹಾರ ಸಿಕ್ಕಿಲ್ಲವೆಂಬ ತಕರಾರು ಮಾಡಿರುತ್ತಾರೆ ಎನ್ನುವುದೂ ಸಹ ಸರ್ಕಾರದ ವಾದವಲ್ಲ. ದಿನಾಂಕ: 5–1–2002 ರಂದು ಬ್ಯಾಂಕಿನ ಅಧಿಕಾರಿ ಸಾಕ್ಷಿಗೆ ಬಂದಿದ್ದು, ಬ್ಯಾಂಕಿನಲ್ಲಿ ಸರಿಯಾದ ಮಾಹಿತಿ ದೊರೆತಿಲ್ಲ ಎನ್ನುವ ಆ ಬಗ್ಗೆ ಸಾಕ್ಷಿ ಹೇಳಲು ಕಾಲಾವಕಾಶ ಕೇಳಿದ್ದು ಕಂಡು ಬಂದಿರುತ್ತದೆ. ಅನಂತರವೂ ಸಹ ಸಾಕ್ಷಿಯನ್ನು ಹಾಜರುಪಡಿಸಲಿಲ್ಲ. ಆದರೆ ಅಂಥ ದಾಖಲೆಗಳನ್ನು ಹಾಜರು ಪಡಿಸಿದಾಗ್ಯೂ ಆ ಬಗ್ಗೆ ಸಾಕ್ಷ್ಯ ಇಲ್ಲದೆ ಅವುಗಳ ಮೌಲ್ಯಮಾಪನ ಮಾಡಲು ಕಾನೂನು, ಇಲಾಖಾ ವಿಚಾರಣೆ ಆದಾಗ್ಯೂ ಆ ಬಗ್ಗೆ ಸಾಕ್ಷ್ಯ ಇಲ್ಲದೆ ಅವುಗಳ ಮೌಲ್ಯಮಾಪನ ಮಾಡಲು ಒಪ್ಪುವುದಿಲ್ಲ. ಆಪಾದಿತರು ತಾವು ಸರಿಯಾಗಿ ಕಾರ್ಯ ನಿರ್ವಹಿಸಿದ್ದೇನೆ. ಹಣದ ದುರುಪಯೋಗ ಮಾಡಿಕೊಂಡಿಲ್ಲ ಎನ್ನುತ್ತಾರೆ. ಅವರು ಲೆಕ್ಕಪತ್ರ ನಿರ್ವಹಣೆ ಮಾಡಿಲ್ಲ ಎಂಬುದರ ಬಗ್ಗೆಯೂ ಯಾವ ಸಾಕ್ಷ್ಯ ಇಲ್ಲ. ಅವೆಲ್ಲಾವುಗಳೂ ಸಂಭವಿಸಿದ ಕಡತಗಳಲ್ಲಿ ಮಾತ್ರ ಲಭ್ಯವಿರುವ ಸಂಗತಿಗಳಾಗಿದ್ದು, ಈ ಎಲ್ಲಾ ಹಿನ್ನೆಲೆಯಲ್ಲಿ, ಪರಿಶೀಲಿಸಿದಾಗ ಪರಿಹಾರ ಹಂಚಿಕೆಯಲ್ಲಿ ಅಥವಾ ಚೆಕ್ಕುಗಳನ್ನು ನೀಡುವಲ್ಲಿ ಅಕ್ರಮ ನಡೆದಿದೆ ಎನ್ನಲಾಗದು. ಅಲ್ಲದೇ 410 ಫಲಾನುಭವಿಗಳಲ್ಲಿ ಒಬ್ಬನಾದರೂ ತನಗೆ ಪರಿಹಾರ ದೊರೆತಿಲ್ಲ ಎಂದು ತಕರಾರು ಸಲ್ಲಿಸಿಲ್ಲ. ಹಾಗಿರುವಾಗ ಪರಿಹಾರ ವಿತರಣೆಯಲ್ಲಿ ಅನ್ಯಾಯ ನಡೆದಿದೆ ಎಂದು ಊಹಿಸಲು ಈ ಸಂಗತಿ ಅವಕಾಶ ನೀಡುವುದಿಲ್ಲ. ಮೇಲಾಗಿ 1998 ರಲ್ಲಿ ನಡೆದ ಘಟನೆಯ ಬಗ್ಗೆ ದಿನಾಂಕ : 27–12–2005 ರಂದು ವಿಚಾರಣೆ ನಡೆಸಲು ಆದೇಶ ಮಾಡಿದ್ದು, ಏಳು ವರ್ಷಗಳ ಹಿಂದಿನ ಸುಸಂಬದ್ಧ ದಾಖಲೆಗಳ ಲಭ್ಯತೆಯನ್ನು ಸಂಭವನೀಯವಾದುದನ್ನಾಗಿ ಮಾಡುವುದಿಲ್ಲ. ಹೀಗೆ ಇಂಥ ಹಣಕಾಸಿನ ವಿಷಯದಲ್ಲಿ ವಿಳಂಬ ಸಾಕ್ಷ್ಯದ ಅಲಭ್ಯತೆಗೆ ಕಾರಣವಾಗುತ್ತದೆ ಎಂದು ಊಹಿಸಬಹುದು. ಹೀಗೆ ಯಾವ ದಷ್ಟಿಯಿಂದ ಪರಿಶೀಲಿಸಿದಾಗ್ಯೂ ಈ ಅಂಶವನ್ನು ರುಜುವಾತು ಪಡಿಸಿಲ್ಲ ಎಂದೇ ನಿರ್ಣಯಿಸಿ ಅದನ್ನು ಇಲ್ಲಾ ಎಂದು ಉತ್ತರಿಸಿ ವರದಿಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (9) ರ ದಿನಾಂಕ: 12–6–2007 ರ ಸರ್ಕಾರದ ಪತ್ರದಲ್ಲಿ ವಿಚಾರಣಾಧಿಕಾರಿಗಳು ಸಲ್ಲಿಸಿರುವ ವರದಿಯನ್ನು ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳಿಗೆ ಕಳುಹಿಸುತ್ತಾ ವಿಚಾರಣಾವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿ, ವಿಚಾರಣಾ ವರದಿಯಲ್ಲಿ ತಿಳಿಸಿರುವ ಅಂಶಗಳ ಬಗ್ಗೆ ಪ್ರಕರಣದಲ್ಲಿ ಆರ್ಥಿಕ ನಷ್ಟ ಏನಾದರೂ ಉಂಟಾಗಿದೆಯೇ? ಎಂಬ ಬಗ್ಗೆ ತಮ್ಮ ಅಭಿಪ್ರಾಯವನ್ನು ನೀಡುವಂತೆ ಜಿಲ್ಲಾಧಿಕಾರಿಗಳನ್ನು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (10) ರ ದಿನಾಂಕ: 17–5–2010ರ ಜಿಲ್ಲಾಧಿಕಾರಿಗಳ ಪತ್ರದಲ್ಲಿ ಪ್ರಕರಣದ ಸಾಕ್ಷಿಗಳ ಹೇಳಿಕೆ ಪತ್ರಗಳಲ್ಲಿಯೂ ಸಹ ಶ್ರೀ ಬಿ.ಟಿ. ಗೋವಿಂದಮರಿಗೌಡ ಇವರ ಪಾತ್ರ ಇರುವುದಿಲ್ಲವೆಂದು, ಅದೇ ವ್ಯವಹಾರಕ್ಕೆ ಸಂಬಂಧಿಸಿದಂತೆ ಸದರಿ ಶಾಖೆಯ ಪ್ರಭಾರ ಹೊಂದಿದ್ದ ಶ್ರೀ ಕೆ.ಸಿ. ಸತೀಶ್, ದ್ವಿ.ದ.ಸ ಇವರ ಮೇಲೆ ನೇರ ಆರೋಪ ಮಾಡಿದ್ದು, ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಯುತ್ತಿದೆಯೆಂದು ತಿಳಿಸಿ ಶ್ರೀ ಬಿ.ಟಿ. ಗೋವಿಂದ ಮರಿಗೌಡ ಇವರನ್ನು ದೋಷಮುಕ್ತರನ್ನಾಗಿ ಪರಿಗಣಿಸಬಹುದಾಗಿದೆ ಎಂದು ಜಿಲ್ಲಾಧಿಕಾರಿಗಳು ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ, ಹಿನ್ನೆಲೆಯಲ್ಲಿ, ವಿಚಾರಣಾಧಿಕಾರಿಗಳು ಸಲ್ಲಿಸಿರುವ ವಿಚಾರಣಾ ವರದಿ ಹಾಗೂ ವಿಚಾರಣಾ ವರದಿಯ ಮೇಲೆ ಜಿಲ್ಲಾಧಿಕಾರಿಗಳು ಸಲ್ಲಿಸಿದ ವರದಿಯಲ್ಲಿಯೂ ಸಹ ಶ್ರೀ ಬಿ.ಟಿ. ಗೋವಿಂದ ಮರಿಗೌಡ ಇವರ ವಿರುದ್ಧ ಆಪಾದನೆಗಳು ಸಾಬೀತಾಗಿಲ್ಲವೆಂದು ತಿಳಿಸಿರುವುದರಿಂದ, ಶ್ರೀ ಬಿ.ಟಿ. ಗೋವಿಂದ ಮರಿಗೌಡ ಇವರ ವಿರುದ್ಧದ ವಿಚಾರಣೆಯನ್ನು ಕೈಬಿಡಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 38 ಎಡಿಇ 2004, ಬೆಂಗಳೂರು, ದಿನಾಂಕ: 20–11–2010**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀ ಬಿ.ಟಿ. ಗೋವಿಂದ ಮರಿಗೌಡ, ಹಿಂದಿನ ತಹಶೀಲ್ದಾರ್, ಹೊಸಕೋಟೆ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ (ಹಾಲಿ ನಿವೃತ್ತರು) ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕೈಬಿಟ್ಟು ಆದೇಶಿಸಿದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ, ಶ್ರೀಯುತರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 2911 ಕಂದಾಯ ಇಲಾಖೆ (ಸೇವೆಗಳು–3)

## ಇಂಧನ ಸಚಿವಾಲಯ

**ವಿಷಯ** : M/s Sai Krishna Hydro Power Private Limited ಇವರಿಗೆ 2.00 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ

**ಓದಲಾಗಿದೆ** : 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಸಂಖ್ಯೆ : ಕೆಆರ್ಇಡಿ/06/ಗೊನವಟಾಲ್ ಕಿಜವಿ/2010/2323 ದಿನಾಂಕ: 3/5–08–2010.

2. ದಿನಾಂಕ: 06–08–2010 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Sai Krishna Hydro Power Private Limited ಇವರಿಗೆ ರಾಯಚೂರು ಜಿಲ್ಲೆಯ ಲಿಂಗಸುಗುರು ತಾಲ್ಲೂಕಿನ ಗೊನವಟಾಲ್ ಗ್ರಾಮದ ಬಳಿ ಕೃಷ್ಣ ನದಿಗೆ ಅಡ್ಡಲಾಗಿ 2.00 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು M/s Sai Krishna Hydro Power Private Limited ಇವರಿಗೆ 2.00 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 346 ಎನ್ಸಿಇ 2010 ಬೆಂಗಳೂರು, ದಿನಾಂಕ: 25–11–2010**

M/s Sai Krishna Hydro Power Private Limited ಇವರಿಗೆ ರಾಯಚೂರು ಜಿಲ್ಲೆಯ ಲಿಂಗಸುಗುರು ತಾಲ್ಲೂಕಿನ ಗೊನವಟಾಲ್ ಗ್ರಾಮದ ಬಳಿ ಕೃಷ್ಣ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (Weir Latitude : $16^0$ 16’ 53” Longitude: $76^0$ 30’ 11” Power House-Latitude: $16^0$ 17’ 15” Longitude: $76^0$ 31’ 04”) ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ :–

1ಅ. ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಒಡಂಬಡಿಕೆಯನ್ನು ರೂ. 400.00 ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಅವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್/ ನೀರಾವರಿ/ ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

12. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

13. The TWL of this project is at 391m which is overlapping with the FRL of allotted project of M/s Krishna Hydro Energy Limited, Guntagola MHS 24.75 MW which at 400m. Therefore, M/s Sai Krishna Hydro Power Pvt., Ltd., should limit the TWL to 401m then with the available head and discharge as per the PFR the potential is 10 MW. Since the present approval is for 2 MW.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್.ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

ಪಿ.ಆರ್. 2912

## INFORMATION TECHNOLOGY BIO TECHNOLOGY AND SCIENCE AND TECHNOLOGY SECRETARIAT

**Sub :-** Approval to the Project Proposal of M/s. AASIA ESTATE DEVELOPERS, Mumbai, to establish an ''Integrated Township comprising IT/ITES Work Space, Residential & Commercial Space in Chennahalli Chokkanhalli and Kadeganahalli Village, Jala Hobli, Bangalore North Taluk. – change of name of the Company to M/s. HINDUJA ESTATE DEVELOPERS.

**Read :-**
1. G.O. No. ITD 08 MDA 2008 (30) Dt: 27-05-2008.
2. Letter No. HED/KUM/SHLCC-21/10-11 dated: 09-11-2010 sent by M/s Hinduja Estate Developers, Mumbai.
3. Proceedings of the $21^{st}$ State High Level Clearance Committee (SHLCC) meeting held on 29-3-2010.

**Preamble:**

In the Government Order read at (1) above, Government is pleased to accord approval to establish Integrated Township comprising of IT/ITES work space, Residential & Commercial Space in 115 acres 191/2 guntas of their own land converted for residential use at 139 different sy nos of Chennahalli, Chokkanhalli and Kadeganahalli, Jala Hobli, Bangalore North Taluk, Bangalore Urban District, as approved in the $14^{th}$ SHLCC meeing held on 17-3-2008.

In the letter dated : 09-11-2010 read at (2) above, M/s. Hinduja Estate Developers, Mumbai, while indicating that they had applied for the amendment to the above order, in regard to change of name of the company from M/s. Aasia Estate Developers to M/s. Hinduja Estate Developers and the said proposal has been approved in $21^{st}$ SHLCC meeting. Hence has requested for issue of Government Order to this effect.

In 21st SHLCC meeting held on 29-03-2010 the SHLCC has approved the request of the Company for change of name to M/s. Hinduja Estate Developers. Hence the following Order :

**Government Order No. ITD 21 MDA 2010, Bangalore, dated 25-11-2010**

In the circumstances explained in the Preamble, Government, in partial modification of the Government Order read at (1) above, are pleased to accord approval for change in the name of the Company from M/s. Aasia Estate Developers to M/s. Hinduja Estate Developers.

There are no changes in respect of other items.

By Order and in the name of the Governor of Karnataka
S. INDUMATHI
Deputy Secretary to Government,
Department of Information Technology,
Bio Technology and Science & Technology

P.R. 2923

## INFORMATION TECHNOLOGY BIO TECHNOLOGY AND SCIENCE AND TECHNOLOGY SECRETARIAT

**Sub :-** Semi-conductor Policy of Karnataka State-2010.

**Read :-** Government Order No. ITD 10 PRM 2008 Dated 25-02-2010.

**Government Order No. ITD 10 PRM 2008, Bangalore, dated 27-11-2010**

Government is pleased to modifiy the last para of clause 5.1 of the Semi-conductor Policy for Karnataka State-2010, issued vide Government Order No. ITD 10 PRM 2008 dated : 25-02-2010, as follows :-

''To encourage setting up of Semiconductor units in **Tier-2 cities, including Mysore, Mangalore, Hubli,** an incentive of Investment Promotion Subsidy would be provided in accordance with the karnataka Industrial Policy 2009-14.''

By Order and in the name of the Governor of Karnataka
**Ashok Kumar C. Manoli**
Principal Secretary to Government,
Department of Information Technology,
Bio Technology and Science & Technology

P.R. 2924

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಕೊಪ್ಪಳ ಜಿಲ್ಲೆ ಗಂಗಾವತಿ ತಾಲ್ಲೂಕಿನ ಈಳಿಗನೂರು ಏತನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** ದಿನಾಂಕ: 26–10–2008ರ ಬಿಜಾಪುರ, ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ತಾ.ಸಂ.–3/ಸ.ಇಂ.–7/ಈಳಿಗನೂರು/2010–11/5804.

**ಪ್ರಸ್ತಾವನೆ :**

ಮೇಲ್ಕಂಡ ಕಾಮಗಾರಿಗೆ 2010–11ನೇ ಸಾಲಿನ ಸಣ್ಣ ನೀರಾವರಿ ಗುಲ್ಬರ್ಗಾ ವೃತ್ತದ ದರಪಟ್ಟಿಯಂತೆ 275.00 ಲಕ್ಷ ರೂ.ಗಳಿಗೆ ತಯಾರಿಸಿದ ಅಂದಾಜು ಪಟ್ಟಿಗೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರರವರು ಮೇಲೆ ಓದಲಾದ ಪತ್ರದಲ್ಲಿ ಆಡಳಿತಾತ್ಮಕ ಅನುಮೋದನೆ ಕೋರಿ ಪ್ರಸ್ತಾವನೆ ಸಲ್ಲಿಸಿದ್ದಾರೆ.

ಪ್ರಸ್ತಾಪಿತ ಏತ ನೀರಾವರಿ ಯೋಜನೆಯನ್ನು ಕೊಪ್ಪಳ ಜಿಲ್ಲೆ ಗಂಗಾವತಿ ತಾಲ್ಲೂಕಿನ ಈಳಿಗನೂರು ಬಳಿ ತುಂಗಭದ್ರಾ ನದಿಗೆ ನಿರ್ಮಿಸಿ ಈಳಿಗನೂರು ಗ್ರಾಮದ ಒಟ್ಟು 129 ಎಕರೆ 03 ಗುಂಟೆ ಅಚ್ಚುಕಟ್ಟು ಪ್ರದೇಶಕ್ಕೆ ನೀರಾವರಿ ಸೌಲಭ್ಯ ಕಲ್ಪಿಸಲು ಉದ್ದೇಶಿಸಿದೆ.

ಈ ಯೋಜನೆಯಲ್ಲಿ 60 ಅಶ್ವಶಕ್ತಿಯ ಎರಡು ಕಾರ್ಯನಿರತ ಡೀಪ್‌ವೆಲ್ ಟರ್ಬೈನ್ ಪಂಪ್‌ಗಳು ಹಾಗೂ ಅಷ್ಟೇ ಸಾಮರ್ಥ್ಯದ ಒಂದು ಹೆಚ್ಚುವರಿ (Standbye) ಪಂಪನ್ನು ಅಳವಡಿಸಲು ವಿನ್ಯಾಸಿಸಲಾಗಿದೆ. ಯೋಜನೆಯಲ್ಲಿ 250 ಎಂ.ಎಂ. ವ್ಯಾಸದ ಡಕ್ಟೈಲ್ ಉಕ್ಕಿನ ಏರು ಕೊಳವೆ ಮಾರ್ಗವನ್ನು (raising main) 6585.00 ಮೀಟರ್ ಉದ್ದಕ್ಕೆ ನಿರ್ಮಿಸಲು ಅವಕಾಶ ಮಾಡಲಾಗಿದೆ. ಯೋಜನೆಯ ಲಾಭ ವೆಚ್ಚದ ಅನುಪಾತ ಶೇ. 10ರ ಬಡ್ಡಿ ದರದಲ್ಲಿ 1.29 ಆಗಿದ್ದು ಯೋಜನೆಯು ಆರ್ಥಿಕವಾಗಿ ಶಕ್ಯವಾಗಿರುತ್ತದೆ.

ಅಂದಾಜು ಪಟ್ಟಿಯನ್ನು ದಿನಾಂಕ 18–02–2010ರ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯ ಸಭೆಗೆ ಮಂಡಿಸಲಾಗಿದ್ದು, ಸಮಿತಿಯು ಕೆಲವು ಅಂಶಗಳನ್ನು ಗಮನಿಸಿ ಷರಾಗಳೊಂದಿಗೆ ಅಂದಾಜಿಗೆ ತೀರುವಳಿ ನೀಡಿದೆ. ಸಮಿತಿಯು ಗಮನಿಸಿರುವ ಅಂಶಗಳಿಗೆ ಪಾಲನಾ ವರದಿ ನೀಡಲಾಗಿದೆ.

ಈ ಯೋಜನೆಯು 2010–11ನೆ ಸಾಲಿನ ಆಯವ್ಯಯದ "ಅಪೆಂಡಿಕ್ಸ್–ಇ" (ಸಂಪುಟ–2) ವಿಶೇಷ ಘಟಕ ಯೋಜನೆ, ಲೆಕ್ಕ ಶೀರ್ಷಿಕೆ 4702–00–789–0–00–422 ಅಡಿ ಪುಟ ಸಂಖ್ಯೆ–219, ಕ್ರಮ ಸಂಖ್ಯೆ–595ರಲ್ಲಿ ರೂ. 275.00 ಲಕ್ಷಗಳ ಅಂದಾಜು ಮೊತ್ತ ಹಾಗೂ 110.00 ಲಕ್ಷ ರೂ.ಗಳ ಅನುದಾನದೊಂದಿಗೆ ಸೇರಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 60 ಏನೀಯೋ 2010, ಬೆಂಗಳೂರು, ದಿನಾಂಕ: 26 ನವೆಂಬರ್ 2010**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೊಪ್ಪಳ ಜಿಲ್ಲೆ ಗಂಗಾವತಿ ತಾಲ್ಲೂಕಿನ ಈಳಿಗನೂರು ಏತನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯ ಅಂದಾಜು ಪಟ್ಟಿಗೆ ಸಣ್ಣ ನೀರಾವರಿ, ಗುಲ್ಬರ್ಗಾ ವೃತ್ತದ 2010–11ನೇ ಸಾಲಿನ ದರಪಟ್ಟಿಯಂತೆ ತಯಾರಿಸಲಾದ 275.00 ಲಕ್ಷ ರೂ.ಗಳ (ಇನ್ನೂರ ಎಪ್ಪತ್ತೈದು ಲಕ್ಷ ರೂ.ಗಳು ಮಾತ್ರ) ಅಂದಾಜು ಪಟ್ಟಿಗೆ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

1. ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅನುಮೋದಿಸಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚಾಗಬಾರದು ಹಾಗೂ ಕಾಮಗಾರಿಯನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.
2. ಒಂದು ವೇಳೆ ಸ್ಥಳ ಪರಿಸ್ಥಿತಿಗೆ ಅನುಗುಣವಾಗಿ ಹೆಚ್ಚಳ ನಿರೀಕ್ಷಿಸಿದಲ್ಲಿ ತಕ್ಷಣವೇ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.
3. ಕಾಮಗಾರಿ ಪ್ರಾರಂಭಿಸುವ ಮುನ್ನ ವಿನ್ಯಾಸ ಬದಲಾವಣೆಯಿಂದಾಗಿ ಅಥವಾ ಬೇರೆ ಕಾರಣದಿಂದ ಅನುಮೋದಿಸಿದ ಅಂದಾಜು ಮೊತ್ತ ಹೆಚ್ಚಾಗುವ ಸಂಭವ ಇದ್ದಲ್ಲಿ, ತಕ್ಷಣ ಪರಿಷ್ಕೃತ ಅಂದಾಜಿಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.
4. ಕಾಮಗಾರಿಯ ಅಂದಾಜು ಪಟ್ಟಿಗೆ ಸಂಬಂಧಿಸಿದಂತೆ ಸಣ್ಣ ನೀರಾವರಿ ದಿನಾಂಕ : 18–02–2008 ರಂದು ನಡೆದ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯ ಸಭೆಯಲ್ಲಿ ನೀಡಿರುವ ಸೂಚನೆಗಳನ್ನು ಚಾಚೂ ತಪ್ಪದೇ ಪಾಲಿಸತಕ್ಕದ್ದು.
5. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಅನುಸಾರ ಟೆಂಡರ್ ಕರೆದು ತೆಗೆದುಕೊಳ್ಳತಕ್ಕದ್ದು.
6. ಕಾಮಗಾರಿಗೆ ಅಗತ್ಯವಿರುವ ಜಮೀನಿನ ಸ್ವಾಧೀನಕ್ಕಾಗಿ ನಿಯಮಾನುಸಾರ ತಕ್ಷಣ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭಿಸಲು ಕ್ರಮ ಕೈಗೊಳ್ಳತಕ್ಕದ್ದು.
7. ಕಾಮಗಾರಿ ಪೂರ್ಣಗೊಂಡ ಕೂಡಲೇ ಪಿ.ಸಿ.ಆರ್. ವರದಿಯನ್ನು ಸಲ್ಲಿಸತಕ್ಕದ್ದು ಹಾಗೂ ಅವಶ್ಯಕತೆ ಇದ್ದಲ್ಲಿ ಪರಿಷ್ಕೃತ ಅಂದಾಜು ತಯಾರಿಸಿ ಟಿ.ಎ.ಸಿ. ಅನುಮೋದನೆ ಪಡೆದು ಸಂಬಂಧಿಸಿದ ಸಕ್ಷಮ ಅಧಿಕಾರಿಗಳಿಗೆ ಅನುಮೋದನೆಗಾಗಿ ಸಲ್ಲಿಸುವುದು.
8. ಇ.ಐ.ಆರ್.ಎಲ್/ವರ್ಕ್‌ಸ್ಲಿಪ್‌ಗಳನ್ನು ಸಲ್ಲಿಸಬೇಕಾದಲ್ಲಿ ತಕ್ಷಣವೇ ಸಲ್ಲಿಸತಕ್ಕದ್ದು.
9. ತಾಂತ್ರಿಕ ಮಂಜೂರಾತಿಯನ್ನು ನೀಡುವ ಮೊದಲು ಅಂದಾಜನ್ನು ಮತ್ತೊಮ್ಮೆ ವಿವರವಾಗಿ ಪರಿಶೀಲಿಸುವುದು.
10. ಈ ಯೋಜನೆಗೆ ನೀರು ಬಳಕೆದಾರರ ಸಂಘವನ್ನು ಸೃಜಿಸಬೇಕು ಹಾಗೂ ನಿರ್ವಹಣೆಯನ್ನು ಸದರಿ ಸಂಘಕ್ಕೆ ವಹಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ : 16–05–2008 ರಲ್ಲಿ ನೀಡಲಾಗಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.2925

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಶ್ರೀ ರಮೇಶ್ ಪಿ. ಭರಸ್ಕಳೆ, ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರ ವಿರುದ್ಧದ ಇಲಾಖಾ ವಿಚಾರಣೆಯ ಅಂತಿಮ ಆದೇಶ.

**ಓದಲಾಗಿದೆ :**

1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಬಾಗಲಕೋಟೆ ಇವರ ಪತ್ರ ಸಂಖ್ಯೆ: ಜಿಪಂಅ/ಮಮಕ/ಸಿಬ್ಬಂದಿ/ಸಿಆರ್/97/03–04 ದಿನಾಂಕ: 23–04–2004.
2. ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ: ಮಮಇ 489 ಎಸ್‌ಜೆಡಿ 2004 ದಿ: 16–10–2004.
3. ಸರ್ಕಾರದ ಕಾರಣ ಕೇಳುವ ನೋಟೀಸಿಗೆ ಶ್ರೀ ರಮೇಶ್ ಪಿ. ಭರಸ್ಕಳೆರವರು ದಿ: 22–10–2004 ರಂದು ನೀಡಿರುವ ಲಿಖಿತ ಸಮಜಾಯಿಷಿ.
4. ಸರ್ಕಾರದ ಆದೇಶ ಸಂಖ್ಯೆ: ಮಮಇ 489 ಎಸ್‌ಜೆಡಿ 2003 ದಿ: 6–12–2004.
5. ಸರ್ಕಾರದ ಆದೇಶ ಸಂಖ್ಯೆ: ಮಮಇ 489 ಎಸ್‌ಜೆಡಿ 2003 ದಿ: 31–05–2006.
6. ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುವ ದಿ: 23–09–2006.
7. ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ: ಮಮಇ 489 ಎಸ್‌ಜೆಡಿ 2004 ದಿ: 06–08–2007.
8. ಸರ್ಕಾರದ ಕಾರಣ ಕೇಳುವ ನೋಟೀಸಿಗೆ ಶ್ರೀ ರಮೇಶ್ ಪಿ. ಭರಸ್ಕಳೆರವರು ದಿ; 16–08–2007 ರಂದು ನೀಡಿರುವ ಲಿಖಿತ ಸಮಜಾಯಿಷಿ.
9. ಸರ್ಕಾರದ ಆದೇಶ ಸಂಖ್ಯೆ: ಮಮಇ 489 ಎಸ್‌ಜೆಡಿ 2003 ದಿನಾಂಕ: 24–01–2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ: 23–04–2004ರ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಬಾಗಲಕೋಟೆ, ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಶ್ರೀ ರಮೇಶ್ ಪಿ. ಭರಸ್ಕಳೆ, ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬಾಗಲಕೋಟೆ, ಇವರು ಅಧಿಕಾರ ವ್ಯಾಪ್ತಿ ಮೀರಿ ಹಣ ದುರುಪಯೋಗ ಹಾಗೂ ಸಾರ್ವತ್ರಿಕ ಚುನಾವಣೆಯ ಸಂದರ್ಭದಲ್ಲಿ ಸಿಬ್ಬಂದಿ ನೇಮಕಾತಿ/ವರ್ಗಾವಣೆಗಳನ್ನು ಮಾಡಿ ಚುನಾವಣಾ ನೀತಿ ಸಂಹಿತೆಯನ್ನು ಉಲ್ಲಂಘಿಸಿ ಕರ್ತವ್ಯ ಲೋಪವೆಸಗಿರುತ್ತಾರೆಂದು ವರದಿ ಮಾಡಿರುತ್ತಾರೆ.

ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ವರದಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಸದರಿಯವರ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸಲು ತೀರ್ಮಾನಿಸಿ ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿ: 16–10–2004ರಲ್ಲಿ ಶ್ರೀ ರಮೇಶ್ ಪಿ. ಭರಸ್ಕಳೆ, ಹಿಂದಿನ ಉಪ

ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬಾಗಲಕೋಟೆರವರಿಗೆ ಕ.ನಾ.ಸೇ. (ಸಿಸಿಎ) ನಿಯಮಾವಳಿಗಳ ನಿಯಮ 1957ರ ನಿಯಮ 11 ರಡಿ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿದೆ.

ಸರ್ಕಾರದ ದಿ: 16–10–2004 ರ ಕಾರಣ ಕೇಳುವ ನೋಟೀಸಿಗೆ ಶ್ರೀ ರಮೇಶ್ ಪಿ. ಭರಸ್ಕಳೆ, ಹಿಂದಿನ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬಾಗಲಕೋಟೆರವರು ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿ: 04–01–2004 ರ ಪತ್ರದೊಂದಿಗೆ ಲಿಖಿತ ಸಮಜಾಯಿಷಿ ನೀಡಿ ಅವರ ಮೇಲಿನ–ಆರೋಪಗಳನ್ನು ಅಲ್ಲಗಳೆದು ಯಾವುದೇ ಆರೋಪಗಳನ್ನು ಒಪ್ಪಿಕೊಂಡಿರುವುದಿಲ್ಲ. ಶ್ರೀಯುತರ ಮೇಲಿನ ಆರೋಪಗಳ ಕುರಿತು ಸತ್ಯಾಸತ್ಯತೆಯನ್ನು ಕಂಡು ಹಿಡಿಯಲು ಕ.ನಾ.ಸೇ. (ಸಿಸಿಎ) ನಿಯಮಾವಳಿಗಳ ನಿಯಮ 1957ರ ನಿಯಮ 11 ರ ಮೇರೆಗೆ ಇಲಾಖಾ ವಿಚಾರಣೆಯನ್ನು ನಡೆಸಲು ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ದಿ: 06–12–2004 ರ ಆದೇಶದಲ್ಲಿ ಶ್ರೀ ಅನಂತಮೂರ್ತಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು ಇವರನ್ನು ಇದೇ ನಿಯಮಾವಳಿಗಳ ನಿಯಮ 11(2) ರ ಮೇರೆಗೆ ವಿಚಾರಣಾಧಿಕಾರಿಗಳನ್ನಾಗಿ ಮತ್ತು ಜಂಟಿ ನಿರ್ದೇಶಕರು (ಆಡಳಿತ) ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಪ್ರಧಾನ ಕಛೇರಿ, ಬೆಂಗಳೂರು ಇವರನ್ನು ಇದೇ ನಿಯಮಾವಳಿಗಳ ನಿಯಮ 11(5)ರ ಮೇರೆಗೆ ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ದಿನಾಂಕ: 31–05–2006 ರ ಆದೇಶದಲ್ಲಿ ಸರ್ಕಾರದ ಆದೇಶ ಸಂಖ್ಯೆ: ಮಮಇ 489 ಎಸ್‌ಜೆಡಿ 2004 ದಿ: 06–12–2004ನ್ನು ಭಾಗಶಃ ಮಾರ್ಪಡಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957 ರ ನಿಯಮ 11(22) ರೊಂದಿಗೆ ಓದಿಕೊಂಡು ನಿಯಮ 11 (2)ರನ್ವಯ ಶ್ರೀ ಎನ್. ಅನಂತಮೂರ್ತಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರ ಬದಲಿಗೆ ಶ್ರೀ ಟಿ.ಎಸ್. ಪಾಲನೇತ್ರ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ನಿಯಮ 11(5)(ಸಿ) ರನ್ವಯ ಜಂಟಿ ನಿರ್ದೇಶಕರು (ಆಡಳಿತ) ಬದಲಿಗೆ ಜಂಟಿ ನಿರ್ದೇಶಕರು/ಅಪರ ನಿರ್ದೇಶಕರು (ಆಡಳಿತ) ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿದೆ.

ಸರ್ಕಾರದ ದಿ: 31–05–2006 ರ ಆದೇಶದನ್ವಯ ವಿಚಾರಣಾಧಿಕಾರಿಗಳು ಶ್ರೀ ರಮೇಶ್ ಪಿ. ಭರಸ್ಕಳೆ, ಉಪನಿರ್ದೇಶಕರು, ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ನಡೆಸಿ ಮೇಲೆ (6) ರಲ್ಲಿ ಓದಲಾದ ದಿ: 23–09–2006 ರಂದು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿ, ಆರೋಪಿ ಅಧಿಕಾರಿಯು ಮಂಡನಾಧಿಕಾರಿಯಾದ ಅಪರ ನಿರ್ದೇಶಕರು (ಆಡಳಿತ), ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರ ವಿರುದ್ಧ ವಿಚಾರಣೆ ಪ್ರಾರಂಭವಾದಾಗಿನಿಂದ ಅಸಮಧಾನ ಹೊಂದಿದ್ದು, ಅನುಚಿತವಾಗಿ ಕೂಡ ವರ್ತಿಸಿರುವುದಾಗಿ ಕಂಡುಬಂದಿದ್ದು, ದಿನಾಂಕ: 12–09–2006 ರಂದು ಅಂತಿಮ ಮಟ್ಟದಲ್ಲಿ ಆರೋಪಿಗಳ ವಾದವನ್ನು ವಿಚಾರಣಾಧಿಕಾರಿಗಳು ಆಲಿಸುವಾಗ ಮಂಡನಾಧಿಕಾರಿಗಳು ಗೈರುಹಾಜರಾಗಿದ್ದು, ಅವರ ಗೈರುಹಾಜರಾತಿಯಲ್ಲಿ ವಿಚಾರಣಾಧಿಕಾರಿಗಳು ವಿಚಾರಣೆಯನ್ನು ನಡೆಸಿ, ಶ್ರೀ ರಮೇಶ್ ಪಿ. ಭರಸ್ಕಳೆ, ಉಪ ನಿರ್ದೇಶಕರು, ಇವರ ವಿರುದ್ಧದ 10 ಆರೋಪಗಳು ಸಾಬೀತಾಗಿಲ್ಲವೆಂದು ನೀಡಿರುವ ವರದಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಲಾಗಿ, ಶ್ರೀ ರಮೇಶ್ ಪಿ. ಭರಸ್ಕಳೆ, ಉಪ ನಿರ್ದೇಶಕರು, ಇವರ ಮೇಲಿನ 5 ಹಾಗೂ 6ನೇ ಆರೋಪಗಳು ಸಾಬೀತಾಗಿಲ್ಲದಿರುವುದನ್ನು ಹಾಗೂ 1,2,3,4,7,8,9 ಮತ್ತು 10 ಆರೋಪಗಳ ಬಗ್ಗೆ ವಿಚಾರಣಾಧಿಕಾರಿಗಳ ವರದಿಯಲ್ಲಿ ನ್ಯೂನತೆ ಇರುವುದು ಮೇಲ್ನೋಟಕ್ಕೆ ಸಾಬೀತಾಗಿರುವ ಹಿನ್ನೆಲೆಯಲ್ಲಿ ಕರ್ನಾಟಕ ನಾಗರಿಕ ಸೇವಾ (ನಡತೆ, ವರ್ಗೀಕರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11(ಎ)(2)ರನ್ವಯ ಮೇಲೆ ಹೇಳಿದ ದೋಷಾರೋಪಣೆಗಳಿಗೆ ಸೇರಿಸಲಾದಂತೆ ಸರ್ಕಾರವು, ವಿಚಾರಣಾಧಿಕಾರಿಗಳ ವರದಿಯನ್ನು ತಿರಸ್ಕರಿಸಿ ಶ್ರೀ ರಮೇಶ್ ಪಿ. ಭರಸ್ಕಳೆ ಉಪನಿರ್ದೇಶಕರು, ಇವರ ಮೇಲಿನ ಆರೋಪಗಳ ಪೈಕಿ 8 ಆರೋಪಗಳು ಅಂದರೆ ಆರೋಪ ಸಂಖ್ಯೆ 1,2,3,4,7,8,9 ಮತ್ತು 10 ಆರೋಪಗಳು ಸಾಬೀತಾಗಿರುವುದಾಗಿ ತೀರ್ಮಾನಿಸಿದೆ ಹಾಗೂ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8 ರಡಿ ಸೂಕ್ತ ದಂಡನೆಯನ್ನು ವಿಧಿಸುವ ಕ್ರಮ ಕೈಕೊಳ್ಳುವ ಬಗ್ಗೆ ಪರಿಶೀಲಿಸಲು ತೀರ್ಮಾನಿಸಿ ಮೇಲೆ ಕ್ರಮ ಸಂಖ್ಯೆ (7) ರಲ್ಲಿ ಓದಲಾದ ದಿನಾಂಕ: 06–08–2007 ರಂದು ಶ್ರೀ ರಮೇಶ್ ಪಿ. ಭರಸ್ಕಳೆ, ಉಪ ನಿರ್ದೇಶಕರು ಇವರಿಗೆ ಕಾರಣ ಕೇಳುವ ನೋಟೀಸನ್ನು ವಿಚಾರಣಾಧಿಕಾರಿಗಳ ವರದಿಯೊಂದಿಗೆ ಜಾರಿ ಮಾಡಲಾಗಿದೆ. ಸರ್ಕಾರದ ದಿನಾಂಕ: 06–08–2007ರ ಕಾರಣ ಕೇಳುವ ನೋಟೀಸಿಗೆ ಶ್ರೀ ರಮೇಶ್ ಪಿ. ಭರಸ್ಕಳೆ, ಉಪ ನಿರ್ದೇಶಕರು, ಮೇಲೆ (8) ರಲ್ಲಿ ಓದಲಾದ ದಿನಾಂಕ: 16–08–2007 ರಂದು ಲಿಖಿತ ಸಮಜಾಯಿಷಿ ನೀಡಿ ಅವರ ವಿರುದ್ಧದ 10 ಆರೋಪಗಳಿಗೆ ಕ್ರಮವಾಗಿ ಸಕಾರಣ ನೀಡಿ ಎಲ್ಲಾ ಆರೋಪಗಳಿಗೆ ವಿಚಾರಣಾಧಿಕಾರಿಗಳು ನಕಾರಾತ್ಮಕವಾಗಿ ಉತ್ತರಿಸಿ ದೋಷಮುಕ್ತಗೊಳಿಸಿ ನ್ಯಾಯದಾನ ನೀಡಿರುವುದರಿಂದ ಅವರನ್ನು ಆರೋಪ ಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ.

ವಿಚಾರಣಾಧಿಕಾರಿಗಳು ಸಲ್ಲಿಸಿರುವ ವಿಚಾರಣಾ ವರದಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಲಾಗಿ, ಶ್ರೀ ರಮೇಶ್ ಪಿ. ಭರಸ್ಕಳೆ, ಉಪ ನಿರ್ದೇಶಕರು, ಇವರ ಮೇಲಿನ 5 ಹಾಗೂ 6ನೇ ಆರೋಪಗಳು ಸಾಬೀತಾಗಿಲ್ಲದಿರುವುದನ್ನು ಹಾಗೂ 1,2,3,4,7,8,9 ಮತ್ತು 10 ಆರೋಪಗಳ ಬಗ್ಗೆ ವಿಚಾರಣಾಧಿಕಾರಿಗಳ ವರದಿಯಲ್ಲಿ ನ್ಯೂನತೆ ಇರುವುದು ಮೇಲ್ನೋಟಕ್ಕೆ ಸಾಬೀತಾಗಿರುವ ಹಿನ್ನೆಲೆಯಲ್ಲಿ ಕರ್ನಾಟಕ ನಾಗರಿಕ ಸೇವಾ (ನಡತೆ, ವರ್ಗೀಕರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11(ಎ)(2)ರನ್ವಯ ಮೇಲೆ ಹೇಳಿದ ದೋಷಾರೋಪಣೆಗಳಿಗೆ ಸೇರಿಸಲಾದಂತೆ ಸರ್ಕಾರವು ವಿಚಾರಣಾಧಿಕಾರಿಗಳ ವರದಿಯನ್ನು ತಿರಸ್ಕರಿಸಿ ಶ್ರೀ ರಮೇಶ್ ಪಿ. ಭರಸ್ಕಳೆ, ಉಪನಿರ್ದೇಶಕರು, ಇವರ ಮೇಲಿನ 10 ಆರೋಪಗಳ ಪೈಕಿ 8 ಆರೋಪಗಳು ಅಂದರೆ ಆರೋಪ ಸಂಖ್ಯೆ 1,2,3,4,7,8,9 ಮತ್ತು 10 ಆರೋಪಗಳು ಗಂಭೀರವಾಗಿದ್ದು, ಅವುಗಳು ಸಾಬೀತಾಗಿರುವುದಾಗಿದೆಯೆಂದು ತೀರ್ಮಾನಿಸಿ, ಅದರಂತೆ ಕ.ನಾ.ಸೇ. (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8 ರಡಿಯಲ್ಲಿ ದಂಡನೆಯನ್ನು ವಿಧಿಸುವ ಬಗ್ಗೆ ಪರಿಶೀಲಿಸಲು ಮೇಲೆ (9) ರಲ್ಲಿ ಓದಲಾದ ದಿನಾಂಕ: 24–01–2008 ರಂದು ಆದೇಶ ಹೊರಡಿಸಿದೆ.

ಶ್ರೀ ರಮೇಶ್ ಪಿ. ಭರಸ್ಕಳೆ, ಉಪ ನಿರ್ದೇಶಕರು, ಅವರು ನೀಡಿರುವ ವಿವರಣೆಯಲ್ಲಿ ಯಾವುದೇ ರೀತಿಯ ಸಮರ್ಥನೀಯ ಕಾರಣಗಳನ್ನು ನೀಡದೆ ಹಾಗೂ ಯಾವುದೇ ಪೂರಕ ದಾಖಲೆಗಳನ್ನು ಒದಗಿಸದೆ, ಬದಲಾಗಿ ಇಲಾಖಾ ವಿಚಾರಣೆಯಲ್ಲಿ ಪರಿಶೀಲಿಸಲಾದ ಪೂರಕ ದಾಖಲೆಗಳು ಸರಿಯಿಲ್ಲವೆಂದು ತಿಳಿಸಿದ್ದರೂ ಸಹ ಅದಕ್ಕೆ ಸಮರ್ಥನೆ ನೀಡಲು ಅಸಮರ್ಥರಾಗಿರುವುದನ್ನು ಮನಗಂಡು, ಅವರು ನೀಡಿರುವ ವಿವರಣೆಗಳನ್ನು ತಿರಸ್ಕರಿಸಿ, ಅವರ ಕಾರ್ಯ ನಿರ್ವಹಣೆಯು ಒಬ್ಬ ಜವಾಬ್ದಾರಿಯುತ ಅಧಿಕಾರಿಗೆ ತಕ್ಕುದಲ್ಲದ ರೀತಿಯಲ್ಲಿದ್ದು, ಅವರು ಆ ಹುದ್ದೆಯಲ್ಲಿ ಕಾರ್ಯ ನಿರ್ವಹಿಸಲು ಅಸಮರ್ಥರೆಂದು ಸದರಿಯವರ ಮೇಲಿನ ಆರೋಪಗಳು ಗಂಭೀರ ಸ್ವರೂಪದ್ದಾಗಿರುವುದನ್ನು ಮನಗಂಡು, ಸರ್ಕಾರವು ಶ್ರೀ ರಮೇಶ್ ಪಿ. ಭರಸ್ಕಳೆ,

ಉಪನಿರ್ದೇಶಕರು, ಇವರಿಗೆ ಅವರ ಒಂದು ವಾರ್ಷಿಕ ಮುಂಬಡ್ತಿ ವೇತನವನ್ನು ಸಂಚಿತ ಪರಿಣಾಮ ಸಹಿತವಾಗಿ (With Cumulative Effect) ಬೀರುವಂತೆ ತಡೆಹಿಡಿಯಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಮಮಇ 185 ಎಸ್‌ಜಿಡಿ 2010 ಬೆಂಗಳೂರು, ದಿನಾಂಕ: 22–11–2010.**

ಪ್ರಸ್ತಾವನೆಯಲ್ಲಿ ವಿವರಿಸಿದ ವಾಸ್ತವಾಂಶಗಳ ಹಿನ್ನೆಲೆಯಲ್ಲಿ, ಶ್ರೀ ರಮೇಶ್ ಪಿ. ಭರಸ್ಕಳೆ, ಹಿಂದಿನ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬಾಗಲಕೋಟೆ, ಪ್ರಸ್ತುತ (ಸ್ಥಳ ನಿರೀಕ್ಷಣೆಯಲ್ಲಿರುವವರು) ಇವರ ಮೇಲಿನ 10 ಆರೋಪಗಳ ಪೈಕಿ 8 ಆರೋಪಗಳು ಅಂದರೆ, ಆರೋಪ ಸಂಖ್ಯೆ: 1,2,3,4,7,8,9 ಮತ್ತು 10 (ಒಟ್ಟು 8 ಆರೋಪಗಳು) ಗಂಭೀರವಾಗಿದ್ದು, ಅವುಗಳು ಸಾಬೀತಾಗಿರುವ ಹಿನ್ನೆಲೆಯಲ್ಲಿ ಸರ್ಕಾರವು ಸದರಿಯವರಿಗೆ ಈ ಹಿಂದೆ ದಿನಾಂಕ: 24–01–2008 ಸಂಖ್ಯೆ: ಮಮಇ 489 ಎಸ್‌ಜಿಡಿ 2003 ರಂದು ಹೊರಡಿಸಿರುವ ಆದೇಶವನ್ನು ಹಿಂಪಡೆದು ಸದರಿಯವರಿಗೆ ಕರ್ನಾಟಕ ಸಿವಿಲ್ ಸೇವೆ (ವ.ನಿ.ಅ) ನಿಯಮಾವಳಿ ನಿಯಮ 8(iii) ರಡಿ ಆರೋಪಿತ ಅಧಿಕಾರಿಯ ಮುಂದಿನ ವಾರ್ಷಿಕ ವೇತನವನ್ನು ಸಂಚಿತ ಪರಿಣಾಮ ಸಹಿತವಾಗಿ (with cumulative effect) ತಡೆಹಿಡಿಯುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಕಮಲಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ–2

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

ಪಿ.ಆರ್. 2932

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ವಕೀಲರ ಕ್ಷೇಮಾಭಿವೃದ್ಧಿ ನಿಧಿಗೆ ಅನುದಾನವನ್ನು ಬಿಡುಗಡೆ ಮಾಡುವ ಕುರಿತು–ಯೋಜನೆ.

**ಓದಲಾಗಿದೆ :**

1. ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ: ಎಫ್‌ಡಿ 331 ವೆಚ್ಚ–10:2009 ದಿನಾಂಕ: 10–09–2009.
2. ಟಿಪ್ಪಣಿ ಸಂಖ್ಯೆ: ಮುಮಕಾ/6136/2010 ದಿನಾಂಕ: 28–09–2010 ಮುಖ್ಯ ಮಂತ್ರಿಗಳ ಕಾರ್ಯದರ್ಶಿಯವರಿಂದ.
3. ಅಧ್ಯಕ್ಷರು ಕರ್ನಾಟಕ ರಾಜ್ಯ ವಕೀಲರ ಪರಿಷತ್ತು ಇವರ ಪತ್ರ ದಿನಾಂಕ: 25–10–2010.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ವಕೀಲರ ಕ್ಷೇಮಾಭಿವೃದ್ಧಿ ನಿಧಿಗೆ 2010–11ನೇ ಸಾಲಿನಲ್ಲಿ, ಲೆಕ್ಕ ಶೀರ್ಷಿಕೆ 2014–00–114–0–03–104 (ಯೋಜನೆ)ಯಡಿ ರೂ. 50 ಲಕ್ಷ ಆಯವ್ಯಯ ಅವಕಾಶ ನೀಡಿದೆ. ಅದನ್ನು ನಿರ್ವಹಿಸಲು ಆರ್ಥಿಕ ಇಲಾಖೆಯು ಮೇಲೆ (1)ರಲ್ಲಿ ಓದಲಾದ ಪತ್ರ ದಿನಾಂಕ: 10–09–2009ರಲ್ಲಿ ಅಡ್ವೋಕೇಟ್ ಜನರಲ್, ಕರ್ನಾಟಕರವರಿಗೆ ಅಧಿಕಾರ ನೀಡಿದೆ. ಮಾನ್ಯ ಮುಖ್ಯ ಮಂತ್ರಿಯವರ ಕಾರ್ಯದರ್ಶಿಯವರು ಉಲ್ಲೇಖಿತ (2)ರ ದಿನಾಂಕ: 28–09–2010ರ ಟಿಪ್ಪಣಿಯಲ್ಲಿ ಸದರಿ ಹಣ ಬಿಡುಗಡೆ ಮಾಡುವಂತೆ ಕೋರಿದ್ದು,

ಮೇಲೆ (3)ರಲ್ಲಿ ಓದಲಾದ ದಿನಾಂಕ: 25–10–2010ರ ಪತ್ರದಲ್ಲಿ ಅಧ್ಯಕ್ಷರು, ಕರ್ನಾಟಕ ರಾಜ್ಯ ವಕೀಲರ ಪರಿಷತ್ತು ಇವರು ವಕೀಲರ ಕ್ಷೇಮಾಭಿವೃದ್ಧಿ ನಿಧಿಗಾಗಿ ಆಯವ್ಯಯದಲ್ಲಿ ಒದಗಿಸಲಾಗಿರುವ ಮೊತ್ತ ರೂ. 50.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ : ಲಾ 80 ಎಲ್‌ಸಿಎಲ್ 2010, ಬೆಂಗಳೂರು, ದಿನಾಂಕ: 26–11–2010.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕರ್ನಾಟಕ ರಾಜ್ಯ ವಕೀಲರ ಕ್ಷೇಮಾಭಿವೃದ್ಧಿ ನಿಧಿಗೆ ಲೆಕ್ಕ ಶೀರ್ಷಿಕೆ 2014–00–114–0–03–104 (lawyers welfare fund) ಯೋಜನೆಯಡಿ ರೂ. 50.00 ಲಕ್ಷಗಳನ್ನು (ರೂಪಾಯಿ ಐವತ್ತು ಲಕ್ಷಗಳು ಮಾತ್ರ) ಈ ಕೆಳಕಂಡ ಷರತ್ತಿಗೊಳಪಟ್ಟು ಕರ್ನಾಟಕ ರಾಜ್ಯ ವಕೀಲರ ಪರಿಷತ್ತಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಹಣವನ್ನು ವಕೀಲರ ಸಂಘಗಳಿಗೆ ಸಹಾಯಾನುದಾನ ನಿಯಮಾವಳಿಯಲ್ಲಿ ಸ್ಪಷ್ಟಪಡಿಸಿರುವಂತೆ ವಕೀಲರ ಪರಿಷತ್ತು, ಅಡ್ವೋಕೇಟ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯರವರಿಗೆ ಬಿಲ್ಲನ್ನು ಸಲ್ಲಿಸಿ ಹಣ ಪಾವತಿಸಿಕೊಳ್ಳಬಹುದಾಗಿರುತ್ತದೆ.

1. ಅನುದಾನವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ನಿಯಮಾನುಸಾರ ಬಳಸತಕ್ಕದ್ದು.
2. ಬಳಕೆ ಪ್ರಮಾಣ ಪತ್ರವನ್ನು ವಕೀಲರ ಪರಿಷತ್ತಿನಿಂದ ಅಂಕಿ ಅಂಶಗಳ ಸಹಿತ ಪಡೆದು ಕಾಲಮಿತಿಯೊಳಗೆ ನಿಯಮಾನುಸಾರ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ವನಇ 489 ಆಂಆಬಿ 2010 ದಿನಾಂಕ: 11–11–2010ರ ಸಹಮತಿ ಹಾಗೂ ಕಾರ್ಯದರ್ಶಿಗಳಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008 ದಿನಾಂಕ: 16–05–2008 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್. ಶಕುಂತಲ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

ಪಿ.ಆರ್. 2933

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಕೆ. ರಾಜಶೇಖರ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು ಇವರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ ಹಾಗೂ ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 236 ಕೆಇವಿ 2007 ದಿನಾಂಕ: 22-09-2009.
2. ವಿಚಾರಣಾಧಿಕಾರಿರವರ ವರದಿ ದಿನಾಂಕ: 15-09-2010.
3. ವಿಚಾರಣಾಧಿಕಾರಿರವರ ಮನವಿ ದಿನಾಂಕ: 14-09-2010.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ಕೋಲಾರ ಜಿಲ್ಲಾ ಪಂಚಾಯತ್‌ನಲ್ಲಿ ಶ್ರೀ ಸಿ. ನಾಗಯ್ಯ, ಕೆ.ಎ.ಎಸ್. ಅಂದಿನ ಉಪ ಕಾರ್ಯದರ್ಶಿ (ಆಡಳಿತ) ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಜಿಲ್ಲಾ ಪಂಚಾಯತ್‌ನ ಕಛೇರಿಗೆ ಅವಶ್ಯವಿರುವ ಗಣಕ ಯಂತ್ರಗಳ ಖರೀದಿಯಲ್ಲಿ ದುರ್ನಡತೆ ಎಸಗಿರುವ ಆರೋಪದ ಸಂಬಂಧ ಇಲಾಖಾ ವಿಚಾರಣೆ ನಡೆಸಲು ಉಲ್ಲೇಖಿತ ಸರ್ಕಾರಿ ಆದೇಶದಲ್ಲಿ ಶ್ರೀ ಕೆ. ರಾಜಶೇಖರ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಈ ಪ್ರಕರಣದಲ್ಲಿ ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ ಕ್ರಮ ಸಂ: (2)ರಲ್ಲಿ ಓದಲಾದ ದಿನಾಂಕ: 15-9-2010 ರಲ್ಲಿ ವಿಚಾರಣೆ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ ಕ್ರಮ ಸಂ.: (3) ರಲ್ಲಿ ಓದಲಾದ ಮನವಿಯಲ್ಲಿ ವಿಚಾರಣಾಧಿಕಾರಿಯವರು ವಿಚಾರಣೆಯನ್ನು ನಡೆಸಿರುವ ಸಂಬಂಧ ಗೌರವಧನ ಹಾಗೂ ಪ್ರಯಾಣ ಭತ್ಯೆ ಮಂಜೂರು ಮಾಡುವಂತೆ ಕೋರಿರುತ್ತಾರೆ. ಅದರಂತೆ ಈ ಆದೇಶ:

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 103 ಎಸ್‌ಇಎನ್ 05 (ಸಿಆಸುಇ 236 ಕೆಇವಿ 07) ಬೆಂಗಳೂರು, ದಿನಾಂಕ: 23-11-2010.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು ಶ್ರೀ ಕೆ. ರಾಜಶೇಖರ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಬೆಂಗಳೂರು ಇವರಿಗೆ ಇಲಾಖಾ ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ಸಲ್ಲಿಸಿದ್ದಕ್ಕಾಗಿ ಸರ್ಕಾರಿ ಆದೇಶ ಸಂ.: ಸಿಆಸುಇ 22 ಸೇಇವಿ 07 ದಿನಾಂಕ: 11-04-08 ರನ್ವಯ ರೂ. 8000.00 (ಎಂಟು ಸಾವಿರ ರೂಪಾಯಿಗಳು ಮಾತ್ರ) ಗೌರವಧನವನ್ನು ಹಾಗೂ ರೂ. 1500.00 (ಒಂದು ಸಾವಿರದ ಐನೂರು ರೂಪಾಯಿಗಳು ಮಾತ್ರ) ಗಳ ಪ್ರಯಾಣ ಭತ್ಯೆಯನ್ನು ಪಾವತಿಸಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು ಆಯವ್ಯಯ ಲೆಕ್ಕ ಶೀರ್ಷಿಕೆ 2052-ಸಚಿವಾಲಯ-ಸಾಮಾನ್ಯ ಸೇವೆಗಳು-090-ಸಚಿವಾಲಯ-01 ಕರ್ನಾಟಕ ಸರ್ಕಾರ ಸಚಿವಾಲಯ-051-ಸಾಮಾನ್ಯ ವೆಚ್ಚಗಳು ರಡಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವ ಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿ.ಆ.ಸು.ಇ (ಸೇವೆಗಳು-2).

ಪಿ.ಆರ್. 2934

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಡಾ: ಬಿ.ಎನ್. ಪ್ರಕಾಶ್, ಹಿಂದಿನ ನಿರ್ದೇಶಕರು, ಆಯುಷ್ ಇಲಾಖೆ, ಬೆಂಗಳೂರು ಇವರ ವಿರುದ್ಧ ಇಲಾಖಾ ವಿಚಾರಣೆ-ಅಂತಿಮ ಆದೇಶ ಕುರಿತು.

**ಓದಲಾಗಿದೆ :**
1. ಉಪ ನಿಬಂಧಕರು, ವಿಚಾರಣೆಗಳು-5, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ: ಕಂಪ್ಲೆಂಟ್/ಲೋಕ್/ಬಿಸಿಡಿ-166/2007/ಡಿಆರ್‌ಇ-5, ದಿನಾಂಕ: 29-09-2007.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 02 ಇಮುವಿ 2007, ದಿನಾಂಕ: 12-12-2007.
3. ಅಪರ ನಿಬಂಧಕರು, ವಿಚಾರಣೆಗಳು-4, ಕರ್ನಾಟಕ ಲೋಕಾಯುಕ್ತ, ಬೆಂಗಳೂರು. ಇವರ ವಿಚಾರಣಾ ವರದಿ ಸಂಖ್ಯೆ: ಲೋಕ್/ಎಆರ್‌ಇ-4/14-ಎ/ಇಎನ್‌ಕ್ಯೂ-01/2008 ದಿನಾಂಕ: 28-01-2010.
4. ಮಾನ್ಯ ಲೋಕಾಯುಕ್ತರವರ ಪತ್ರ ಸಂಖ್ಯೆ: ಲೋಕ್/ಎಆರ್‌ಇ-4/ಇಎನ್‌ಕ್ಯೂ-01/2008-09, ದಿನಾಂಕ: 22-04-2010.
5. ಸರ್ಕಾರದ ನೋಟೀಸ್ ಸಂಖ್ಯೆ: ಸಿಆಸುಇ 02 ಇಮುವಿ 2007, ದಿನಾಂಕ: 05-05-2010.
6. ಡಾ: ಬಿ.ಎನ್. ಪ್ರಕಾಶ್, ಇವರು ನೋಟೀಸ್‌ಗೆ ದಿನಾಂಕ: 19-05-2010 ರಂದು ನೀಡಿರುವ ಉತ್ತರ.

**ಪ್ರಸ್ತಾವನೆ:**

ಡಾ: ಬಿ.ಎನ್. ಪ್ರಕಾಶ್, ನಿರ್ದೇಶಕರು, ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವ ವಿದ್ಯಾಲಯ, ಬೆಂಗಳೂರು ಇವರು ನಿರ್ದೇಶಕರು, ಆಯುಷ್ ಇಲಾಖೆ, ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ಶ್ರೀ ಟಿ.ಎಸ್. ಗೋಪಾಲಕೃಷ್ಣ, ಔಷಧಿ ಪರಿವೀಕ್ಷಕರು, ಆಯಷ್ ಇಲಾಖೆ, ಇವರಿಗೆ ಪದೋನ್ನತಿ ನೀಡಲು ದುರುದ್ದೇಶವಾಗಿ ಅವರ ಮೇಲಿನ ಆಪಾದನೆಗಳನ್ನು ಮರೆಮಾಡಿ ಅವರಿಗೆ ಸಹಾಯ ಮಾಡಿದ್ದು, ಆರೋಪಿತ ಅಧಿಕಾರಿಯು ನಿಯಮಗಳನ್ನು ಸರಿಯಾಗಿ ನಿರ್ವಹಿಸದೇ ಕರ್ತವ್ಯ ಲೋಪ ಎಸಗಿರುವ ಬಗ್ಗೆ ಇವರ ವಿರುದ್ಧ ಮೇಲೆ ಓದಲಾದ (1)ರಲ್ಲಿ ಮಾನ್ಯ ಲೋಕಾಯುಕ್ತವು ತನಿಖೆಯನ್ನು ನಡೆಸಿ ವಿಚಾರಣೆಗೆ ಅನುಮತಿ ನೀಡುವಂತೆ ಕೋರಲಾಗಿತ್ತು. ಮೇಲೆ ಓದಲಾದ (2)ರ ದಿನಾಂಕ: 12-12-2007 ರ ಆದೇಶದಲ್ಲಿ ಸದರಿ ಅಧಿಕಾರಿಯವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಮಾನ್ಯ ಲೋಕಾಯುಕ್ತರಿಗೆ ಅನುಮತಿಯನ್ನು ನೀಡಲಾಗಿದೆ. ಮೇಲೆ ಓದಲಾದ (3)ರ ದಿನಾಂಕ: 28-01-2010ರಲ್ಲಿ ಅಪರ ನಿಬಂಧಕರು, ವಿಚಾರಣೆಗಳು-4, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮಾನ್ಯ ಲೋಕಾಯುಕ್ತರಿಗೆ ವಿಚಾರಣಾ ವರದಿ ಸಲ್ಲಿಸಿ, ಅದರಲ್ಲಿ ಆರೋಪಿತ ಅಧಿಕಾರಿಯು ಶ್ರೀ ಟಿ.ಎಸ್. ಗೋಪಾಲ ಕೃಷ್ಣ, ಔಷಧಿ ಪರಿವೀಕ್ಷಕರು, ಇವರ ವಿರುದ್ಧದ ವಿಚಾರಣೆ ಬಗ್ಗೆ ತಾವೇ ಸ್ವತಃ ಲೋಕಾಯುಕ್ತಕ್ಕೆ ವಿಚಾರಣಾ ವರದಿ ಸಲ್ಲಿಸಿರುವುದರಿಂದ ಅದನ್ನು ಸರ್ಕಾರಕ್ಕೆ ಕಳುಹಿಸಿದ ಪತ್ರದಲ್ಲಿ ನಮೂದಿಸಬಹುದಾಗಿತ್ತೆಂದು ಆದರೆ ಆರೋಪಿತ ಅಧಿಕಾರಿ ಹಾಗೇ

ಮಾಡಿಲ್ಲದೇ ಇರುವುದರಿಂದ ಆರೋಪವು ಸಾಬೀತಾಗಿದೆಯೆಂದು ವಿಚಾರಣಾ ವರದಿಯಲ್ಲಿ ತಿಳಿಸಿರುತ್ತಾರೆ. ಅದರಂತೆ ಮೇಲೆ ಓದಲಾದ (4)ರ ದಿನಾಂಕ: 22–04–2010ರ ಪತ್ರದಲ್ಲಿ ಮಾನ್ಯ ಲೋಕಾಯುಕ್ತರು ವಿಚಾರಣಾ ವರದಿಯನ್ನು ಅಂಗೀಕರಿಸಿ ಸದರಿಯವರಿಗೆ **"ವಾಗ್ದಂಡನೆ"** ವಿಧಿಸಲು ಶಿಫಾರಸ್ಸು ಮಾಡಿರುತ್ತಾರೆ. ಮೇಲೆ (5)ರಲ್ಲಿ ಓದಲಾದ ದಿನಾಂಕ: 05–05–2010ರ ನೋಟೀಸಿನಲ್ಲಿ ಆರೋಪಿತ ಅಧಿಕಾರಿ ಡಾ: ಬಿ.ಎನ್. ಪ್ರಕಾಶ್, ಇವರಿಗೆ 2ನೇ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಿ ಈ ವಿಚಾರಣಾ ವರದಿ ಬಗ್ಗೆ ಏನಾದರೂ ಹೇಳಿಕೆ ಇದ್ದಲ್ಲಿ ಸಲ್ಲಿಸುವಂತೆ ತಿಳಿಸಲಾಗಿತ್ತು. ಮೇಲೆ ಓದಲಾದ (6)ರ ದಿನಾಂಕ: 19–05–2010ರಲ್ಲಿ ಆರೋಪಿತ ಅಧಿಕಾರಿಯವರಾದ ಡಾ: ಬಿ.ಎನ್. ಪ್ರಕಾಶ್, ಇವರು ತಮ್ಮ ಹೇಳಿಕೆಯನ್ನು ಸಲ್ಲಿಸಿ, ಕಾರ್ಯವಿಧಾನವನ್ನು ಮತ್ತು ನಿಯಮಗಳನ್ನು ಅರ್ಥೈಸುವಲ್ಲಿ ಲೋಪವಾಗಿದೆ ಎಂದು ಪರೋಕ್ಷವಾಗಿ ಒಪ್ಪಿಕೊಂಡಿರುತ್ತಾರೆ. ಆದುದರಿಂದ ಮಾನ್ಯ ಲೋಕಾಯುಕ್ತರ ಶಿಫಾರಸ್ಸಿನಂತೆ ಸರ್ಕಾರವು ಈ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 02 ಇಮುವಿ 2007 ಬೆಂಗಳೂರು, ದಿನಾಂಕ: 29–11–2010.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು ಡಾ: ಬಿ.ಎನ್. ಪ್ರಕಾಶ್, ನಿರ್ದೇಶಕರು, ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು ಹಾಗೂ ಹಿಂದಿನ ನಿರ್ದೇಶಕರು, ಆಯುಷ್ ಇಲಾಖೆ, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 8 (ii) ರಂತೆ ಪ್ರಸ್ತಾವನೆಯಲ್ಲಿ ವಿವರಿಸಿದ ಆರೋಪಕ್ಕಾಗಿ ಇನ್ನು ಮುಂದೆ ಇಂತಹ ಪ್ರಕರಣಗಳಿಗೆ ಅವಕಾಶ ನೀಡಬಾರದೆನ್ನುವ ವಾಗ್ದಂಡನೆಯನ್ನು ವಿಧಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವೆಗಳು–3)

ಪಿ.ಆರ್. 2935

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕನ್ನಡ, ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಗೆ ಹೆಚ್ಚುವರಿಯಾಗಿ ಒಂದು ಅಧೀನ ಕಾರ್ಯದರ್ಶಿ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ** : ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಕಡತ ಸಂಖ್ಯೆ: ಕಸಂವಾಪ್ರ/109/ಸ್ವೀಮರ/2010.

**ಪ್ರಸ್ತಾವನೆ:**

ಮೇಲೆ ಓದಲಾದ ಕಡತ ಸಂಖ್ಯೆ ಕಸಂವಾಪ್ರ 109 ಸ್ವೀಮರ 2010 ರಲ್ಲಿ ವಾರ್ತಾ ಇಲಾಖೆಗೆ ಅಧೀನ ಕಾರ್ಯದರ್ಶಿ ಹುದ್ದೆಯೊಂದನ್ನು ಸೃಜಿಸಲು ಆರ್ಥಿಕ ಇಲಾಖೆಯು ಸಹಮತಿ ನೀಡಿದೆಯೆಂದು, ಅದರಂತೆ ಒಂದು ಅಧೀನ ಕಾರ್ಯದರ್ಶಿ ಹುದ್ದೆಯನ್ನು ಸೃಜಿಸಲು ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಇಲಾಖೆಯ ಸರ್ಕಾರದ ಕಾರ್ಯದರ್ಶಿಯವರು ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 580 ಸಅಸೇ 2010 ಬೆಂಗಳೂರು, ದಿನಾಂಕ: 1ನೇ ಡಿಸೆಂಬರ್ 2010.**

ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಗೆ (Dealing with Information Subject) ಹೆಚ್ಚುವರಿಯಾಗಿ ವೇತನ ಶ್ರೇಣಿ ರೂ. 14050–25,050 ರ ಅಧೀನ ಕಾರ್ಯದರ್ಶಿ ಹುದ್ದೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೃಜಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ದಿನಾಂಕ: 18–11–2010ರ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 913 ವೆಚ್ಚ–12/2010 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ
(ಸೇವೆಗಳು–3).

ಪಿ.ಆರ್. 2936

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ಹುಬ್ಬಳ್ಳಿ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ 32 ರಾಅವಿ 2004 ದಿನಾಂಕ 20.03.2007.
2. ಸರ್ಕಾರದ ಆದೇಶ ಸಂಖ್ಯೆ. 32 ರಾಅವಿ 2004 ದಿನಾಂಕ 07.05.2007.
3. ಸರ್ಕಾರದ ಪತ್ರ ಸಂಖ್ಯೆ. ಮೂಅಇ 23 ರಾಅವಿ 2008 ದಿನಾಂಕ 20.12.2008.
4. ಸರ್ಕಾರದ ಆದೇಶ ಸಂಖ್ಯೆ. 23 ರಾಅವಿ 2008 ದಿನಾಂಕ 23.05.2009.
5. ಸರ್ಕಾರದ ಆದೇಶ ಸಂಖ್ಯೆ. 23 ರಾಅವಿ 2008 ದಿನಾಂಕ 27.11.2009.
6. ಜಿಲ್ಲಾಧಿಕಾರಿ, ಧಾರವಾಡ ಜಿಲ್ಲೆ ಇವರ ದಿನಾಂಕ 10.03.2010 ರ ಪತ್ರ ಸಂಖ್ಯೆ DC/PA/CR-52/2009-10.
7. ಸರ್ಕಾರದ ಆದೇಶ ಸಂಖ್ಯೆ. 23 ರಾಅವಿ 2008 ದಿನಾಂಕ 26.03.2010.
8. ಸರ್ಕಾರದ ಆದೇಶ ಸಂಖ್ಯೆ 23 ರಾಅವಿ 2008 ದಿನಾಂಕ 30.03.2010.

9. ವಿಶೇಷ ಜಿಲ್ಲಾಧಿಕಾರಿಗಳು, ಕೆಐಎಡಿಬಿ ಇವರ ದಿನಾಂಕ 8.09.2010ರ ಆದೇಶ ಸಂಖ್ಯೆ KIADB/ಕೇಂ.ಕವಿಜೆ/1849–(2)10/88–2010-11.
10. ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ ಇವರ ದಿನಾಂಕ 8.10.2010 ರ ಪತ್ರ ಸಂಖ್ಯೆ ACCTS/AIRPORT/CR-27/2010-11.
11. ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ. ಆಇ 483 ಬಿಆರ್‌ಎಸ್ 2009 ದಿನಾಂಕ 30.11.2010.

**ಪ್ರಸ್ತಾವನೆ :**

ಭಾರತೀಯ ವಿಮಾನ ನಿಲ್ದಾಣಗಳ ಪ್ರಾಧಿಕಾರವು (AAI) ತಯಾರಿಸಿ ಅನುಷ್ಠಾನಗೊಳಿಸಲು ನಿರ್ಧರಿಸಿದ ದೀರ್ಘಾವಧಿ ಕ್ರಿಯಾ ಯೋಜನೆ ಪ್ರಕಾರ 650 ಎಕರೆ ಜಮೀನನ್ನು ಸ್ವಾಧೀನಪಡಿಸಿಕೊಂಡು ಹುಬ್ಬಳ್ಳಿ ವಿಮಾನ ನಿಲ್ದಾಣವನ್ನು ಅಭಿವೃದ್ಧಿಪಡಿಸಲು ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದೆ.

2. ಇದರಂತೆ ಹುಬ್ಬಳ್ಳಿ ವಿಮಾನ ನಿಲ್ದಾಣದ ಅಭಿವೃದ್ಧಿ ಹಾಗೂ ಸದರಿ ವಿಮಾನ ನಿಲ್ದಾಣದ ವಿಸ್ತರಣೆಗೆ ಅಗತ್ಯವಾದ ಭೂಸ್ವಾಧೀನಕ್ಕಾಗಿ ರೂ. 20.00 ಕೋಟಿಗಳನ್ನು ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಆದೇಶದಲ್ಲಿ ಬಿಡುಗಡೆ ಮಾಡಲಾಗಿದೆ.

3. ಮುಖ್ಯಮಂತ್ರಿಗಳ ಪ್ರಧಾನ ಕಾರ್ಯದರ್ಶಿ ಹಾಗೂ ಮುಖ್ಯ ಕಾರ್ಯದರ್ಶಿಗಳ ಸಮ್ಮುಖದಲ್ಲಿ ಏರ್ಪಟ್ಟ ಸಭೆಯ ನಿರ್ಧಾರದಂತೆ, ಹುಬ್ಬಳ್ಳಿ ವಿಮಾನ ನಿಲ್ದಾಣಕ್ಕೆ ಅಗತ್ಯವಾದ ಭೂಸ್ವಾಧೀನ ವೆಚ್ಚದ ಅರ್ಧ ಪಾಲನ್ನು ಕೆಐಎಡಿಬಿ ಯಿಂದ ಭರಿಸುವಂತೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಪತ್ರದಲ್ಲಿ ಸೂಚಿಸಿ, ಭೂ ನಿವಾಸಿಗಳ ಮಾಲೀಕರಿಗೆ ಪರಿಹಾರ ಪಾವತಿಗಾಗಿ ರೂ. 3.31 ಕೋಟಿಗಳನ್ನು ಧಾರವಾಡ ಜಿಲ್ಲಾಧಿಕಾರಿಯವರಿಗೆ ಬಿಡುಗಡೆ ಮಾಡುವಂತೆ ಹಾಗೂ ಇದಕ್ಕೆ ಬದಲಾಗಿ ಕೆಐಎಡಿಬಿ 60 ಎಕರೆ ಭೂ ಪ್ರದೇಶವನ್ನು ಅವರ ವಾಣಿಜ್ಯಾತ್ಮಕ ಅಭಿವೃದ್ಧಿಗಾಗಿ ನೀಡುವುದಾಗಿ ತಿಳಿಸಲಾಗಿದ್ದಿತು. ಇದರನುಸಾರ ದಿನಾಂಕ 29.12.2008ರ ಆದೇಶ ಸಂಖ್ಯೆ KIADB/ಕೇಂಕ/ಭೂಸ್ವಾ/1849(2)/11084/08–09 ರಲ್ಲಿ ರೂ. 3.31 ಕೋಟಿಗಳನ್ನು KIADBಯು ಧಾರವಾಡ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಿದೆ.

4. ಮೇಲೆ ಕ್ರ.ಸಂಖ್ಯೆ (4) ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ 23.05.2009 ರಲ್ಲಿ ಹುಬ್ಬಳ್ಳಿ ವಿಮಾನ ನಿಲ್ದಾಣದ ವಿಸ್ತರಣೆಯ ವ್ಯಾಪ್ತಿಯಲ್ಲಿ ಬರುವ ಕೈಗಾರಿಕಾ ಪ್ರದೇಶದ ಭೂಮಿಯನ್ನು ಸ್ವಾಧೀನಪಡಿಸಿಕೊಂಡು ಭೂ ಮಾಲೀಕರಿಗೆ ಪರಿಹಾರ ಧನವನ್ನು ಪಾವತಿಸಲು ರೂ. 20.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.

5. ಮೇಲೆ ಕ್ರ.ಸಂಖ್ಯೆ (5) ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ 27.11.2009 ರಲ್ಲಿ ಹುಬ್ಬಳ್ಳಿ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಅವಶ್ಯವಿರುವ ರೂ. 25.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.

6. ಜಿಲ್ಲಾಧಿಕಾರಿಗಳು, ಧಾರವಾಡ ಇವರು ಕ್ರಮ ಸಂಖ್ಯೆ (6) ರಲ್ಲಿ ಓದಲಾದ ಪತ್ರ ದಿನಾಂಕ 10.03.2010 ರಲ್ಲಿ ಹುಬ್ಬಳ್ಳಿ, ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಭೂ ಸ್ವಾಧೀನಪಡಿಸಿಕೊಂಡಿರುವ ಜಮೀನಿನ ಮಾಲೀಕರಿಗೆ ಪರಿಹಾರ ಪಾವತಿಸುವ ಸಲುವಾಗಿ ಈಗಾಗಲೇ ಬಿಡುಗಡೆ ಮಾಡಿರುವ ಒಟ್ಟು ಮೊತ್ತ ರೂ. 45.00 ಕೋಟಿಗಳು ಸಂಪೂರ್ಣವಾಗಿ ಬಳಕೆಯಾಗಿರುವುದರಿಂದ ಅವಶ್ಯವಿರುವ ರೂ. 50.00 ಕೋಟಿಗಳನ್ನು ಹೆಚ್ಚುವರಿಯಾಗಿ ಕೂಡಲೇ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

7. ಮೇಲೆ ಕ್ರ.ಸಂಖ್ಯೆ (7) ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ 26.03.2010 ರಲ್ಲಿ ಹುಬ್ಬಳ್ಳಿ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಭೂ ಸ್ವಾಧೀನಪಡಿಸಿಕೊಂಡಿರುವ ಜಮೀನಿನ ಮಾಲೀಕರಿಗೆ ಪರಿಹಾರ ಪಾವತಿಸುವ ಸಲುವಾಗಿ ರೂ. 20.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.

8. ಮೇಲೆ ಕ್ರ.ಸಂಖ್ಯೆ (8) ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ 30.03.2010ರಲ್ಲಿ ಹುಬ್ಬಳ್ಳಿ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಭೂಸ್ವಾಧೀನ ಪಡಿಸಿಕೊಂಡಿರುವ ಜಮೀನಿನ ಮಾಲೀಕರಿಗೆ ಪರಿಹಾರ ಪಾವತಿಸುವ ಸಲುವಾಗಿ ರೂ. 30.00 ಕೋಟಿಗಳನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 5465–01–190–1–05 ಸಣ್ಣ ವಿಮಾನಗಳ ಅಭಿವೃದ್ಧಿ ಇದರಡಿ ಲಭ್ಯವಿದ್ದ ಮೊತ್ತವು ಹಾಗೂ ಇತರೆ ಲೆಕ್ಕಶೀರ್ಷಿಕೆಗಳಿಂದ ಪುನರ್ ವಿನಿಯೋಗದ ಮೂಲಕ ಬಿಡುಗಡೆ ಮಾಡಲಾಗಿದೆ.

9. ಮೇಲೆ ಕ್ರ.ಸಂ. 9ರಲ್ಲಿ ಓದಲಾದ ಆದೇಶದಲ್ಲಿ ವಿಮಾನ ನಿಲ್ದಾಣಕ್ಕಾಗಿ ಸ್ವಾಧೀನಪಡಿಸಿಕೊಂಡಿರುವ ಜಮೀನಿಗೆ ಪರಿಹಾರ ಪಾವತಿಸಲು ರೂ. 50.00 ಕೋಟಿಗಳನ್ನು ಬಿಡುಗಡೆ ಮಾಡಿದೆ.

10. ಮೇಲೆ ಕ್ರ.ಸಂಖ್ಯೆ (10) ರಲ್ಲಿ ಓದಲಾದ ಪತ್ರದಲ್ಲಿ ರೂ. 143.56 ಕೋಟಿ ಪರಿಹಾರವನ್ನು ಈಗಾಗಲೆ ಬಿಡುಗಡೆ ಮಾಡಲಾಗಿದ್ದು, ಅಧಿಸೂಚನೆ ಹೊರಡಿಸಿರುವ ಬಾಕಿ ಜಮೀನಿಗೆ ಸಂಬಂಧಿಸಿದಂತೆ ಪರಿಹಾರ ಧನವನ್ನು ನೀಡಲು ರೂ. 323.46 ಕೋಟಿಗಳು ಅವಶ್ಯವಿದೆ ಎಂದು ಜಿಲ್ಲಾಧಿಕಾರಿ, ಧಾರವಾಡರವರು ತಿಳಿಸಿ ಈ ಭೂ ಮಾಲೀಕರಿಗೆ ಪರಿಹಾರ ಪಾವತಿಸಲು ತ್ವರಿತವಾಗಿ ರೂ. 100.00 ಕೋಟಿಗಳನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ.

11. ಧಾರವಾಡ ಜಿಲ್ಲಾಧಿಕಾರಿಗಳ ಪತ್ರದಂತೆ, ಹುಬ್ಬಳ್ಳಿ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಭೂ ಸ್ವಾಧೀನಪಡಿಸಿಕೊಂಡಿರುವ ಜಮೀನಿನ ಮಾಲೀಕರಿಗೆ ಪಾವತಿಸಬೇಕಾದ ಪರಿಹಾರದ ಬಾಕಿ ಮೊತ್ತ ರೂ. 100.00 ಕೋಟಿಗಳನ್ನು ಬಿಡುಗಡೆ ಮಾಡಲು ನಿರ್ಧರಿಸಿ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಗೆ ಕಳುಹಿಸಲಾಗಿದ್ದಿತು.

12. ಮೇಲೆ ಕ್ರ.ಸಂಖ್ಯೆ (11) ರಲ್ಲಿ ಓದಲಾದ ಆರ್ಥಿಕ ಇಲಾಖೆಯ ಆದೇಶ ದಿನಾಂಕ 29.11.2010 ರಲ್ಲಿ ಹುಬ್ಬಳ್ಳಿ ವಿಮಾನ ನಿಲ್ದಾಣಗಳ ಅಭಿವೃದ್ಧಿಗೆ ಅಗತ್ಯವಾದ ರೂ. 8,000.00 ಲಕ್ಷಗಳನ್ನು ಈ ಕೆಳ ಕಾಣಿಸಿದ ಲೆಕ್ಕ ಶೀರ್ಷಿಕೆಯಿಂದ ಮರು ಹೊಂದಾಣಿಕೆ ಮೂಲಕ ಭರಿಸಲು ಅನುಮತಿಯನ್ನು ನೀಡಲಾಗಿರುತ್ತದೆ.

5465–01–190–3–05 (P) Cost sharing for new projects-211 Investments.

ಅಂತೆಯೇ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಮೂಅಇ 23 ರಾಅವಿ 2008, ಬೆಂಗಳೂರು ದಿನಾಂಕ 04.12.2010**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಹುಬ್ಬಳ್ಳಿ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಭೂ ಸ್ವಾಧೀನಪಡಿಸಿಕೊಂಡಿರುವ ಬಾಕಿ ಜಮೀನಿನ ಮಾಲೀಕರಿಗೆ ಪರಿಹಾರ ಪಾವತಿಸುವ ಸಲುವಾಗಿ ರೂ. 8,000.00 ಲಕ್ಷಗಳನ್ನು (ರೂ. ಎಂಟು ಸಾವಿರ ಲಕ್ಷಗಳು) ಮಾತ್ರ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

2) ಈ ಮೊತ್ತವನ್ನು 2010–11 ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 5465–01–190–3–05 (P) Cost sharing for new projects-211 Investments. ಇದರಡಿ ಲಭ್ಯವಿರುವ ಮೊತ್ತದಿಂದ ಈ ಕೆಳ ಕಾಣಿಸಿದ ಲೆಕ್ಕ ಶೀರ್ಷಿಕೆಗೆ ಮರು ಹೊಂದಾಣಿಕೆ ಮೂಲಕ ಬಿಡುಗಡೆ ಮಾಡಲಾಗಿದೆ.

5465–01–190–3–05 (P) ಸಣ್ಣ ವಿಮಾನಗಳ ಅಭಿವೃದ್ಧಿ–211–ಬಂಡವಾಳ ಹೂಡಿಕೆ.

3) ಈ ಮೊತ್ತವನ್ನು ಜಿಲ್ಲಾಧಿಕಾರಿಗಳು ಧಾರವಾಡ ಜಿಲ್ಲೆ, ಧಾರವಾಡ ಇವರು ಪೇಯೀಸ್ ರಸೀತಿ ಮೂಲಕ ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಮೇಲು ರುಜುವಿನೊಂದಿಗೆ ರಾಜ್ಯ ಹುಜೂರು ಖಜಾನೆ, ಬೆಂಗಳೂರು ಇಲ್ಲಿ ತೆಗೆಯುವುದು.

4) ಈ ಆದೇಶವನ್ನು ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ ಆಇ 142 ಬಿಆರ್‌ಎಸ್ 2010 ದಿನಾಂಕ 29.11.2010 ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 1831 ವೆಚ್ಚ–I/ 2010 ದಿನಾಂಕ 30.11.2010 ರ ಅನುಸಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಎ. ಬಾಬುರವೀಂದ್ರನಾಥ್ ಪಟೇಲ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

ಪಿ.ಆರ್. 2948

## INFRASTRUCTURE DEVELOPMENT SECRETARIAT

## CORRIGENDUM

**IDD/70/ITS/2010, Bangalore Dated 19.11.2010**

The contents figuring out against item no(c) and (d) in the Government Order bearing No. IDD/78/ITS/2009 Bangalore, dated 09-12-2009 may be modified and read as hereunder.

(c) KSIIDC would formulate the documents for procurement of an SPV with the equity share holdings by the private sector and Government of Karnataka shall hold a 'Golden Share' in the proposed SPV. The private sector enterprise in charge of the SPV shall initiate immediate action to allot the golden share to the Government of Karnataka, no sooner the incorporation of the SPV.

(b) It shall be specified in the procurement documents that, pre-defined percentages of the port space would be made available for usage by the Government or its agencies or VADA and the balance to be used by the developer. The defined percentages would be fixed on the basis of detailed feasibility report/DPR.

By Order and in the name of the Governor of Karnataka
**R. Shivalingaiah**
Under Secretary to Government,
Infrastructure Development Department

P.R. 2949

## ಇಂಧನ ಸಚಿವಾಲಯ

## ತಿದ್ದುಪಡಿ

**ಸಂಖ್ಯೆ: ಇಎನ್ 447 ಎನ್‌ಸಿಇ 2010 ಬೆಂಗಳೂರು, ದಿನಾಂಕ 25–11–2010**

ಸರ್ಕಾರಿ ಆದೇಶ ಸಂಖ್ಯೆ: ಇಎನ್ 312 ಎನ್‌ಸಿಇ 2010 ದಿನಾಂಕ: 22.09.2010 ರ ಆದೇಶ ಭಾಗದ ನಿಬಂಧನೆ ಸಂಖ್ಯೆ: 13 ರಲ್ಲಿ ನಮೂದಿಸಲಾಗಿರುವ:–

"The FRL of the weir of this project should be 424m with the TWL at 404m. At any reason this project should not overlap with the already commissioned project of Chayadevi MHS of M/s Bhoruka Power Corporation Limited."

ಎಂಬುದನ್ನು

"The FRL of the weir of this project should be 424m with the TWL at 392m. At any reason this project should not overlap with the already commissioned project of Chayadevi MHS of M/s Bhoruka Power Corporation Limited" ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

ಪಿ.ಆರ್. 2950

## ನಗರಾಭಿವೃದ್ಧಿ ಸಚಿವಾಲಯ

## ತಿದ್ದುಪಡಿ ಆದೇಶ

**ಸಂಖ್ಯೆ: ನಅಇ 189 ಬೆಮಪ್ರಾ 2010 ಬೆಂಗಳೂರು, ದಿನಾಂಕ 22–11–2010**

ಸರ್ಕಾರದ ಆದೇಶ ಸಂಖ್ಯೆ: ನಅಇ 189 ಬೆಮಪ್ರಾ 2010 ದಿನಾಂಕ: 16.08.2010ರಲ್ಲಿ ಹೊರಡಿಸಿರುವ ಆದೇಶಕ್ಕೆ ಕೆಳಗಿನಂತೆ ತಿದ್ದುಪಡಿ ತರಲಾಗಿದೆ.

1. ಸದರಿ ಆದೇಶದಲ್ಲಿನ ಉಲ್ಲೇಖ 3 ರಲ್ಲಿ ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಕಛೇರಿಯ ಏಕ ಕಡತ ಸಂಖ್ಯೆ: ನಯೋ(7)/ಉನೀಯೋ(ವಿ)ರಾಮದುರ್ಗ/ಮಯೋಪ–I/ಅಂತಿಮ/10, ಯಲ್ಲಿ ನೀಡಿರುವ ಅಭಿಪ್ರಾಯ ದಿನಾಂಕ ಎಂಬುದರ ಬದಲಾಗಿ

ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಕಛೇರಿಯ ಏಕ ಕಡತ ಸಂಖ್ಯೆ: ನಗ್ರಾಯೋ(7)/ಉನೀ(ಯೋವಿ) ಬೈಲಹೊಂಗಲ:ಮ.ಯೋ:(ಪರಿಷ್ಕೃತ–I)/ಅಂತಿಮ:2010. ದಿನಾಂಕ: 11–06–2010 ಎಂಬುದಾಗಿ

2. ಸದರಿ ಆದೇಶದ ಪ್ರಸ್ತಾವನೆಯಲ್ಲಿನ 9ನೇ ಸಾಲಿನಲ್ಲಿ "ರಾಮದುರ್ಗ ಪಟ್ಟಣದ ಜನಸಂಖ್ಯೆಯು" ಎಂಬುದರ ಬದಲಾಗಿ "ಬೈಲಹೊಂಗಲ ಪಟ್ಟಣದ ಜನಸಂಖ್ಯೆಯು" ಎಂಬುದಾಗಿ
3. ಸದರಿ ಆದೇಶದ ಪ್ರಸ್ತಾವನೆಯಲ್ಲಿನ 11ನೇ ಸಾಲಿನಲ್ಲಿ "1495.57" ಹೆಕ್ಟೇರ್ ಎಂಬುದರ ಬದಲಾಗಿ "1498.57" ಎಂಬುದಾಗಿ ಮತ್ತು
4. ಸದರಿ ಆದೇಶದ ಪುಟ 2ರಲ್ಲಿನ ಪ್ರತಿಗಳ 3ನೇ ಸಾಲಿನಲ್ಲಿ "ಮುಖ್ಯಾಧಿಕಾರಿಗಳು ಪುರಸಭೆ ಯೋಜನಾ ಪ್ರಾಧಿಕಾರ, ರಾಮದುರ್ಗ" ಎಂಬುದರ ಬದಲಾಗಿ "ಮುಖ್ಯಾಧಿಕಾರಿಗಳು ಬೈಲಹೊಂಗಲ ಯೋಜನಾ ಪ್ರಾಧಿಕಾರ" ಎಂಬುದಾಗಿ ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2951

**ಎಂ.ಎಂ. ಹಿರೇಮಠ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ

## FINANCE SECRETARIAT

## CORRIGENDUM

**No. FD 2 TFP 2010, Bangalore, Dated 25-11-2010**

**Sub:** General Delegation of Common Financial Powers to HODs and others.

In the Annexure to Government Order No. FD 2 TFP 2010 dated 30-04-2010, the figures "Rs. 50,000/-" in column No. 4 (pertaining to Divisional level officers) against Sl.No. 15-Repair of vehicles, may be read as "Rs. 50,000/- per vehicle subject to Rs. 7.00 lakh p.a."

By Order and in the name of the Governor of Karnataka

**C. ShamaRao**

P.R. 2952

Deputy Secretary to Government
Finance Department (FR & BCC)

## INFORMATION TECHNOLOGY, BIO TECHNOLOGY AND SCIENCE AND TECHNOLOGY SECRETARIAT

**Sub:** Withdrawal of unwire Bangalore project Entrusted to M/s Micro sense Pvt. Ltd.,

**Read:** 1) Govt. Orfer No. ITD 37 MDA 2007, dated 12-11-2007.
2) Letter dated: 24-03-2009 sent by the Director, IIIT-B

**PREAMBLE:**

In the Government Order read at [1] above, approval was accorded to Karnataka Biotechnology and Information Technology Services (KBITS) as a facilitator to implement the 'Unwire Bangalore' Project and to award the said project to M/s. Microsense Pvt. Ltd., Bangalore, subject to the following conditions:-

1. The Technical Committee will first establish the deliverables and have a 'Proof of Concept' phase of the project over a limited area before scaling up the project.
2. The successful bidder will give a security deposit and a performance guarantee, and
3. Karnataka Biotechnology and Information Technology Services (KBITS) will have a formal agreement with the successful bidder.

The Director, IIIT-B and Chairman, Technical Evaluation Committee Vide their letter read at (2) above has recommended to formally close this project in the wake of 3G License being considered by Government of India and due to difficulty in procurement of Wi-Max equipment required for the project. Apart from it M/s. Microsense was not able to mobilize resources and are expecting far too many support elements from the Government.

In the above circumstances, it is considered to formally close the 'Unwire Bangalore' Project and to withdraw the Government Order read [1] above awarding the Project M/s Microsense Pvt. Ltd., Hence this order.

**Government Order No. ITD 45 MDA 2010, Bangalore Dated 04-12-2010**

In the circumstances explained in the Preamble Government are pleased to wind up unwire Bangalore project entrusted to M/s. Microsense Pvt. Ltd., and to withdraw the Government Order No. ITD 37 MDA 2007, dated 12-11-2007.

By Order and in the name of the Governor of Karnataka

**M.V. Krishnamurthy**

P.R. 2953

Under Secretary to Government,
Department of Information Technology,
Bio Technology and Science & Technology Department

## SOCIAL WELFARE SECRETARIAT

**Sub:** Issue of Government Guarantee in favour of National Backward Classes Finance & Development Corporation (NBCFDC), New Delhi for raising of loan of Rs. 15.00 crores by D. Devaraj Urs Backward Classes Development Corporation Limited for the purpose of extending loan assistance to beneficiaries.

**Read:**
1) Single file No. DBCDC/Accts/NBCFDC/Guarantee/2010-11 dated 19-08-2010 of Managing Director, D. Devaraj Urs Backward Classes Development Corporation Ltd.,
2) Proceedings of the Cabinet meeting held on 09-11-2010.

**PREAMBLE:**

D. Devaraj Urs Backward Classes Development Corporation Limited (DBCDC) is implementing the loan schemes to various activities for Backward Classes beneficiaries.

National Backward Classes Finance and Development Corporation (NBCFDC) is extending loans to the State Agencies against the State Government Guarantee. DBCDC is the State agency for Karnataka. The NBCFDC gives the loan amount restricting to 85% of the project cost, the beneficiary contribution is 5% and the DBCDC contributes 10%. The NBCFDC charges interest on the loan being given to the DBCDC at the rate of 1% to 3% depend upon the scheme. In turn the DBCDC charges interest at 4% to 6% to the beneficiaries depend upon the scheme. The difference of interest amount will be utilized for meeting the expenditure being incurred by DBCDC for administration etc. The State Agency i.e DBCDC has availed loan of Rs. 183.00 crores from NBCFDC and DBCDC has repaid loan of Rs. 111.32 crores and interest of Rs. 13.64 crores to NBCFDC.

The Managing Director, DBCDC has requested the Government to extend Government Guarantee of Rs. 24.00 crore in favour of NBCFDC, to assists the beneficiaries around 31000 persons. Hence this order.

**Government Order No. SWD 151 BMS 2010, Bangalore Dated 01-12-2010**

After due examination of the proposal of the Managing Director, D. Devaraj Urs Backward Classes Development Corporation, Govt. are pleased to extend Government Guarantee of Rs. 15.00 crore (Rupees Fifteen crores only) in favour of National Backward Classes Finance and Development Corporation, Government of India, New Delhi on behalf of D. Devaraj Urs Backward Classes Development Corporation for raising of the loan and implementing the schemes for the economic upliftment of backward classes, subject to the following conditions.

i) 1% Guarantee Commission should be paid.
ii) The Guarantee for the balance amount may be considered after the Corporation establishes an action plan to improve its recovery.

This Order issues in concurrence of Finance Department vide its Note No./FD 539 Exp-3/10 dated 29-09-2010 and Cabinet decision dated 09-11-2010.

By Order and in the name of the Governor of Karnataka
**M.M. Bhatte**
Under Secretary to Government,
Social Welfare Department

P.R. 2954

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ದಾವಣಗೆರೆ ಜಿಲ್ಲೆ ಮತ್ತು ದಾವಣಗೆರೆ ಜಿಲ್ಲೆಯ ದಾವಣಗೆರೆ ತಾಲ್ಲೂಕು, ಜಗಳೂರು ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಯೋಇ 309 ಪಿಟಿಪಿ 94, ದಿನಾಂಕ : 07–08–1995
2. ಸರ್ಕಾರಿ ಆದೇಶ ಸಂಖ್ಯೆ : ಯೋಇ 7 ಯೋವಿವಿ 2010 ದಿನಾಂಕ : 05–03–2010
3. ಭಾರತೀಯ ಜನತಾ ಪಾರ್ಟಿಯ ರಾಜ್ಯಾ ಉಪಾಧ್ಯಕ್ಷರ ಪತ್ರ ಸಂಖ್ಯೆ : ಭಾಜಪ/ರಜಾ/ನಾನಿ/304/2010 ದಿನಾಂಕ : 10–08–2010
4. ಭಾರತೀಯ ಜನತಾ ಪಾರ್ಟಿಯ ರಾಜ್ಯ ಉಪಾಧ್ಯಕ್ಷರ ಪತ್ರ ಸಂಖ್ಯೆ : ಭಾಜಪ/ರಜಾ/ನಾನಿ/311/2010 ದಿನಾಂಕ ; 10–08–2010
5. ಭಾರತೀಯ ಜನತಾ ಪಾರ್ಟಿಯ ರಾಜ್ಯ ಉಪಾಧ್ಯಕ್ಷರ ಪತ್ರ ಸಂಖ್ಯೆ : ಭಾಜಪ/ರಜಾ/ನಾನಿ/3/2010 ದಿನಾಂಕ : 10–08–2010.

**ಪ್ರಸ್ತಾವನೆ :**

ಮೇಲೆ ಓದಲಾದ (1) ರ ದಿನಾಂಕ : 07–08–1995ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20) ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ / ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಮೇಲೆ ಓದಲಾದ (2)ರ ಆದೇಶವನ್ನು ರದ್ದುಪಡಿಸಿ ಮೇಲೆ ಓದಲಾದ (3) (4) ಮತ್ತು (5) ರ ಪತ್ರದಲ್ಲಿ ಸೂಚಿಸಿರುವ ಸದಸ್ಯರನ್ನು ದಾವಣಗೆರೆ ಜಿಲ್ಲೆ ಮತ್ತು ದಾವಣಗೆರೆ ಜಿಲ್ಲೆಯ ದಾವಣಗೆರೆ ತಾಲ್ಲೂಕು ಮತ್ತು ಜಗಳೂರು ತಾಲ್ಲೂಕಿನ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ, ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಯೋಇ 7 ಯೋಐವಿ 2010, ಬೆಂಗಳೂರು, ದಿನಾಂಕ : 4ನೇ ಡಿಸೆಂಬರ್ 2010**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20) ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಈ ಕೆಳಕಂಡವರನ್ನು ಜಿಲ್ಲಾ ಮತ್ತು ತಾಲ್ಲೂಕು ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರನ್ನಾಗಿ ನಾಮನಿರ್ದೇಶನ ಮಾಡಲಾಗಿದೆ.

| ಕ್ರ.ಸಂ. | ಜಿಲ್ಲೆ | ಹೆಸರು | ವರ್ಗ |
|---|---|---|---|
| 1. | ದಾವಣಗೆರೆ ಜಿಲ್ಲೆ | 1. ಶ್ರೀ ಎಸ್. ಜಯಕುಮಾರ್, ವಕೀಲರು, ಚೌಕೀಪೇಟೆ, ದಾವಣಗೆರೆ ಜಿಲ್ಲೆ | ಅಲ್ಪಸಂಖ್ಯಾತ |
| | | 2. ಶ್ರೀ ಬಿ.ಜೆ. ರೇವಣಸಿದ್ದಪ್ಪ, ದೊಡ್ಡಬಾತಿ ದಾವಣಗೆರೆ ಉತ್ತರ ಜಿಲ್ಲೆ | ಬಿ.ಸಿಎಂ. |
| | | 3. ಶ್ರೀ ವಿಜಯಕುಮಾರ್ ಪಾಟೀಲ್, ಚನ್ನಗಿರಿ ತಾಲ್ಲೂಕು ದಾವಣಗೆರೆ ಜಿಲ್ಲೆ | ಸಾಮಾನ್ಯ |
| | | 4. ಶ್ರೀಮತಿ ಎ.ಬಿ. ಗಂಗಮ್ಮ ಕೋಂ ಜಿ. ಬಸವರಾಜ, ಗೌರಿಶಂಕರ ನಿಲಯ, #63, ಅಮರಾವತಿ, ಹರಿಹರ ತಾಲ್ಲೂಕು ದಾವಣಗೆರೆ | ಮಹಿಳೆ |
| | | 5. ಶ್ರೀ ರಂಗನಾಥ ಬಿನ್ ಲಕ್ಷ್ಮಪ್ಪ, ಕುಳಗಟ್ಟಿ ಹೊನ್ನಾಳಿ ತಾಲ್ಲೂಕು ದಾವಣಗೆರೆ ಜಿಲ್ಲೆ | ಎಸ್.ಟಿ |
| 2. | ದಾವಣಗೆರೆ ಜಿಲ್ಲೆ (ದಾವಣಗೆರೆ ತಾ) | 1. ಶ್ರೀ ಎಂ.ವಿ ನಾಗರಾಜು ಬಿನ್ ವಿರುಪಾಕ್ಷಪ್ಪ, ಹಳೇ ಬೆಳವನೂರು, ದಾವಣಗೆರೆ ತಾಲ್ಲೂಕು ಮತ್ತು ಜಿಲ್ಲೆ | ಸಾಮಾನ್ಯ |
| | | 2. ಶ್ರೀ ಮಂಜುನಾಥ ಕೆ.ಆರ್. ಬಿನ್ ರುದ್ರಪ್ಪ, ಶ್ಯಾಗಲೆ, ದಾವಣಗೆರೆ ತಾಲ್ಲೂಕು ಮತ್ತು ಜಿಲ್ಲೆ | ಎಸ್.ಟಿ |
| | | 3. ಶ್ರೀಮತಿ ಅನುಸೂಯಮ್ಮ ಅಣಜಿ, ದಾವಣಗೆರೆ ತಾಲ್ಲೂಕು ಮತ್ತು ಜಿಲ್ಲೆ | ಮಹಿಳೆ |
| | | 4. ಶ್ರೀ ಕೆಂಚಪ್ಪ, ಮಾಗನಹಳ್ಳಿ, ದಾವಣಗೆರೆ ತಾಲ್ಲೂಕು ಮತ್ತು ಜಿಲ್ಲೆ | ಬಿ.ಸಿಎಂ. |
| | | 5. ಶ್ರೀ ಕೆ.ಬಿ. ನಾಗಪ್ಪ, ಬಿ. ಕಲ್ಪನಲಹಳ್ಳಿ, ದಾವಣಗೆರೆ ತಾಲ್ಲೂಕು ಮತ್ತು ಜಿಲ್ಲೆ | ಸಾಮಾನ್ಯ |
| | | 6. ಶ್ರೀ ಬಿ.ಜಿ. ಮಂಜುನಾಥ ಬಿನ್ ಗುರುಸಿದ್ದಪ್ಪ ಹೆಚ್. ಬಸಾಪುರ ದಾವಣಗೆರೆ ತಾಲ್ಲೂಕು ಮತ್ತು ಜಿಲ್ಲೆ | ಅ.ಸಂ. |
| 3. | ದಾವಣಗೆರೆ ಜಿಲ್ಲೆ (ಜಗಳೂರು ತಾ) | 1. ಶ್ರೀಮತಿ ಸವಿತಾ ಕೋಂ ಸಿದ್ಧನಗೌಡ, ಅಣಬೂರು, ಜಗಳೂರು ತಾಲ್ಲೂಕು, ದಾವಣಗೆರೆ ಜಿಲ್ಲೆ | ಮಹಿಳೆ |
| | | 2. ಶ್ರೀ ಲೋಕೇಶ್ವರಪ್ಪ ಬಿನ್ ಪೂಜಾರಿ ರೇವಣಸಿದ್ದಪ್ಪ, ಕಲ್ಲೇನಹಳ್ಳಿ, ಪಲ್ಲಾಗಟ್ಟೆ ಅಂಚೆ, ಜಗಳೂರು ತಾ ದಾವಣಗೆರೆ ಜಿಲ್ಲೆ. ದೂ : 97401–01579 | ಸಾಮಾನ್ಯ |
| | | 3. ಶ್ರೀ ಕೆ. ಮರುಳಸಿದ್ಧಪ್ಪ ಬಿನ್ ಕಲ್ಲಪ್ಪ, ಅರಿಶಿನಗುಂಡಿ, ತೋರಣಗಟ್ಟೆ ಅಂಚೆ, ಜಗಳೂರು ತಾಲ್ಲೂಕು ದಾವಣಗೆರೆ ಜಿಲ್ಲೆ, ದೂ : 96118–52145 | ಸಾಮಾನ್ಯ |
| | | 4. ಶ್ರೀ ಡಿ. ಬಸವರಾಜಪ್ಪ ಬಿನ್ ಭರ್ಮಯ್ಯ, ಗೋಪಗೊಂಡನಹಳ್ಳಿ, ಜಗಳೂರು ತಾಲ್ಲೂಕು, ದಾವಣಗೆರೆ ಜಿಲ್ಲೆ | ಎಸ್.ಟಿ |
| | | 5. ಶ್ರೀ ಬಿ.ಹೆಚ್. ಪರುಶುರಾಮ್ (ಟೈಲರ್) ಬಿನ್ ಬಿ.ಆರ್. ಚೌಡಪ್ಪ, ಹಳೇ ತಾಲ್ಲೂಕು, ಆಫೀಸ್ ರಸ್ತೆ, ಜಗಳೂರು, ದಾವಣಗೆರೆ ಜಿಲ್ಲೆ | ಬಿ.ಸಿಎಂ. |
| | | 6. ಶ್ರೀ ಕಲೀಲ್ ಸಾಬ್ ಬಿನ್ ಚಮನ್‌ಸಾಬ್, ಅಶ್ವಥ್ ಬಡಾವಣೆ, ಜಗಳೂರು | ಅ.ಸಂ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ, 1 & 2

ಯೋಜನೆ, ಕಾರ್ಯಕ್ರಮ ಸಂಯೋಜನೆ

ಮತ್ತು ಸಾಂಖ್ಯಿಕ ಇಲಾಖೆ

ಪಿ. ಆರ್. 2964

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಗುಲ್ಬರ್ಗಾ ಜಿಲ್ಲೆಯ ಸೇಡಂ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಯೋಇ 309 ಪಿಟಿಪಿ 94, ದಿನಾಂಕ : 07–08–1995

2. ಮಾನ್ಯ ರಾಜ್ಯ ಉಪಾಧ್ಯಕ್ಷರು ಬಾ.ಜ.ಪಾ ಇವರ ಟಿಪ್ಪಣಿ ಪತ್ರ ಸಂಖ್ಯೆ : ಭಾಜಪ/ರಾಕ/ನಾನಿ/254/2010 ದಿನಾಂಕ : 12–07–2010.

**ಪ್ರಸ್ತಾವನೆ :**

ಮೇಲೆ ಓದಲಾದ (1) ರ ದಿನಾಂಕ : 07–08–1995ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ / ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ

ಸಮಿತಿಗಳನ್ನು ರಚಿಸಲಾಗಿರುತ್ತದೆ. ಗುಲ್ಬರ್ಗಾ ಜಿಲ್ಲೆಯ ಸೇಡಂ ತಾಲ್ಲೂಕಿನ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ, ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಯೋಇ 70 ಯೋವಿವಿ 2009,(ಭಾ–1) ಬೆಂಗಳೂರು, ದಿನಾಂಕ : 4ನೇ ಡಿಸೆಂಬರ್ 2010**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಈ ಕೆಳಕಂಡ ಸದಸ್ಯರುಗಳನ್ನು ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರನ್ನಾಗಿ ನಾಮನಿರ್ದೇಶನ ಮಾಡಲಾಗಿದೆ.

| ಕ್ರ.ಸಂ. | ಜಿಲ್ಲೆ | ಅಭ್ಯರ್ಥಿಗಳ ಹೆಸರು ಶ್ರೀಯುತರು/ಶ್ರೀಮತಿ | ವರ್ಗ |
|---|---|---|---|
| 1. | ಗುಲ್ಬರ್ಗಾ ಜಿಲ್ಲೆ (ಸೇಡಂ ತಾಲ್ಲೂಕು) | 1. ಶ್ರೀ ವಿಶ್ವನಾಥರೆಡ್ಡಿ ಪಾಟೀಲ್ ಬಿನ್ ಭೀಮರೆಡ್ಡಿ ಪಾಟೀಲ್, ಕುರುಕುಂಟಾ, ಸೇಡಂ | ಸಾಮಾನ್ಯ |
| | | 2. ಶ್ರೀ ಅನಿಲ್ ಕುಮಾರ್ ಬಿನ್ ವೀರಶೆಟ್ಟಿ ಪಾಟೀಲ್, ವಿದ್ಯಾನಗರ ತಾಲ್ಲೂಕು, ಸೇಡಂ | ಸಾಮಾನ್ಯ |
| | | 3. ಶ್ರೀಮತಿ ಶಕುಂತಲ ಕೋಂ. ರಾಜಶೇಖರ್, ಮಿಠಲ್ ಕೋಡ್, ವಾಸವದತ್ತ ಕಾಲೋನಿ, ಸೇಡಂ | ಮಹಿಳೆ |
| | | 4. ಶ್ರೀ ಲಕ್ಷ್ಮೀನಾರಾಯಣ್ ಬಿನ್ ಗಣಪತರಾವ್ ಚಿಮ್ಮನಚೋಡಕರ್, ಬಸವನಗರ, ಸೇಡಂ | ಎಸ್.ಸಿ. |
| | | 5. ಶ್ರೀ ಶ್ರೀನಾಥ್ ಬಿನ್ ಶರಣಪ್ಪ ಪಿಲ್ಲಿ ಹೂಡಾ (ಕೆ) ಮಳಖೇಡ ರೋಡ್ | ಬಿ.ಸಿ.ಎಂ. |
| | | 6. ಡಾ : ಶಿರಾಜುದ್ದೀನ್, ರೆಹಮತ್ ನಗರ, ಸೇಡಂ | ಅಲ್ಪ ಸಂ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ, 1 & 2

ಯೋಜನೆ, ಕಾರ್ಯಕ್ರಮ ಸಂಯೋಜನೆ

ಮತ್ತು ಸಾಂಖ್ಯಿಕ ಇಲಾಖೆ

ಪಿ. ಆರ್. 2965

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಜಿಲ್ಲಾ ಮಟ್ಟದ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ ಮತ್ತು 20 ಅಂಶಗಳ/15 ಅಂಶಗಳ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಉಸ್ತುವಾರಿ ಸಚಿವರುಗಳನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಯೋಇ 147 ಯೋವಿವಿ 2010 ದಿನಾಂಕ : 16–11–2010

2. ಮಾನ್ಯ ಮುಖ್ಯ ಮಂತ್ರಿಯವರ ಟಿಪ್ಪಣಿ ಸಂಖ್ಯೆ : ಪಿಎಸ್‌ಸಿಎಂ/3576/2010 ದಿನಾಂಕ : 03–12–2010.

**ಪ್ರಸ್ತಾವನೆ :**

ಮೇಲೆ ಓದಲಾದ (2)ರ ಟಿಪ್ಪಣಿಯಲ್ಲಿ ಮಾನ್ಯ ಮುಖ್ಯಮಂತ್ರಿಗಳು ತುಮಕೂರು ಮತ್ತು ಹಾಸನ ಜಿಲ್ಲೆಗಳಿಗೆ ಉಸ್ತುವಾರಿ ಸಚಿವರನ್ನು ನೇಮಕ ಮಾಡಲು ಆದೇಶ ಹೊರಡಿಸುವಂತೆ ಸೂಚಿಸಿದ್ದು, ಅದರಂತೆ ಮೇಲೆ ಓದಲಾದ (1)ರ ಆದೇಶವನ್ನು ಭಾಗಶಃ ಮಾರ್ಪಡಿಸಿ ಚಾಮರಾಜನಗರ ಜಿಲ್ಲೆಗೆ ಮಾನ್ಯ ಶ್ರೀ ಸಿ.ಹೆಚ್. ವಿಜಯಶಂಕರ್‌ರವರ ಬದಲಾಗಿ ಮಾನ್ಯ ಶ್ರೀ ಎಂ.ಪಿ. ರೇಣುಕಾಚಾರ್ಯರವರನ್ನು ಹಾಗೂ ಹಾಸನ ಜಿಲ್ಲೆಗೆ ಶ್ರೀ ಎಂ.ಪಿ. ರೇಣುಕಾಚಾರ್ಯರವರ ಬದಲಾಗಿ ಮಾನ್ಯ ಶ್ರೀ ವಿ. ಸೋಮಣ್ಣ ರವರನ್ನು ತುಮಕೂರು ಜಿಲ್ಲೆಯ ಜೊತೆಗೆ ಹಾಸನ ಜಿಲ್ಲಾ ಉಸ್ತುವಾರಿ ಸಚಿವರನ್ನಾಗಿ ನೇಮಕ ಮಾಡಲು ಉದ್ದೇಶಿಸಲಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಯೋಇ 147 ಯೋವಿವಿ 2010, ಬೆಂಗಳೂರು, ದಿನಾಂಕ : 4ನೇ ಡಿಸೆಂಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಜಿಲ್ಲಾಮಟ್ಟದ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ ಮತ್ತು 20 ಅಂಶಗಳ/15 ಅಂಶಗಳ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಶ್ರೀ ಎಂ.ಪಿ. ರೇಣುಕಾಚಾರ್ಯರವರನ್ನು ಚಾಮರಾಜನಗರ ಜಿಲ್ಲೆಗೆ ಹಾಗೂ ಶ್ರೀ ವಿ. ಸೋಮಣ್ಣರವರನ್ನು ತುಮಕೂರು ಜಿಲ್ಲೆಯ ಜೊತೆಗೆ ಹಾಸನ ಜಿಲ್ಲಾ ಉಸ್ತುವಾರಿ ಸಚಿವರನ್ನಾಗಿ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ ಹಾಗೂ ದಿನಾಂಕ : 16–11–2010ರ ಅನುಬಂಧದಲ್ಲಿ ಸೂಕ್ತ ತಿದ್ದುಪಡಿ ಮಾಡಿ ಈ ಆದೇಶಕ್ಕೆ ಲಗತ್ತಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ, 1 & 2

ಯೋಜನೆ, ಕಾರ್ಯಕ್ರಮ ಸಂಯೋಜನೆ

ಮತ್ತು ಸಾಂಖ್ಯಿಕ ಇಲಾಖೆ

## ಅನುಬಂಧ

ಸರ್ಕಾರಿ ಆದೇಶ ಸಂಖ್ಯೆ : ಯೋಇ 147 ಯೋವಿವಿ 2010, ದಿನಾಂಕ : 04–12–2010

| ಕ್ರಮ ಸಂಖ್ಯೆ | ಸಚಿವರುಗಳ ಹೆಸರು | ಜಿಲ್ಲೆಗಳ ಹೆಸರು |
|---|---|---|
| 1 | ಶ್ರೀ ಬಿ.ಎಸ್. ಯಡಿಯೂರಪ್ಪ ಮುಖ್ಯಮಂತ್ರಿಗಳು | ಶಿವಮೊಗ್ಗ |
| 2 | ಶ್ರೀ ಗೋವಿಂದ ಕಾರಜೋಳ | ಬಾಗಲಕೋಟೆ |
| 3 | ಡಾ ಃ ವಿ.ಎಸ್. ಆಚಾರ್ಯ | ಉಡುಪಿ |
| 4 | ಶ್ರೀ ಸಿ. ಎಂ. ಉದಾಸಿ | ಹಾವೇರಿ |
| 5 | ಶ್ರೀ ಆರ್. ಅಶೋಕ್ | ಬೆಂಗಳೂರು ನಗರ (ಬೆಂಗಳೂರು ದಕ್ಷಿಣ ಜಿಲ್ಲೆಯ 14 ವಿಧಾನ ಸಭಾ ಕ್ಷೇತ್ರಗಳು) ಮಂಡ್ಯ |
| 6 | ಶ್ರೀ ಎಸ್. ಎ. ರವೀಂದ್ರನಾಥ್ | ದಾವಣಗೆರೆ |
| 7 | ಶ್ರೀ ಜಿ. ಜನಾರ್ಧನ ರೆಡ್ಡಿ | ಬಳ್ಳಾರಿ |
| 8 | ಶ್ರೀ ಕಾಗೇರಿ ವಿಶ್ವೇಶ್ವರ ಹೆಗಡೆ | ಉತ್ತರ ಕನ್ನಡ |
| 9 | ಶ್ರೀ ಜಿ. ಕರುಣಾಕರ ರೆಡ್ಡಿ | ಚಿತ್ರದುರ್ಗ |
| 10 | ಶ್ರೀ ಬಿ.ಎನ್. ಬಚ್ಚೇಗೌಡ | ಬೆಂಗಳೂರು ಗ್ರಾಮಾಂತರ ಮತ್ತು ರಾಮನಗರ |
| 11 | ಶ್ರೀ ಬಸವರಾಜ ಬೊಮ್ಮಾಯಿ | ಗುಲ್ಬರ್ಗಾ |
| 12 | ಶ್ರೀ ಜಗದೀಶ್ ಶೆಟ್ಟರ್ | ಧಾರವಾಡ |
| 13 | ಶ್ರೀ ಬಿ. ಶ್ರೀರಾಮುಲು | ರಾಯಚೂರು |
| 14 | ಶ್ರೀ ರೇವುನಾಯಕ ಬೆಳಮಗಿ | ಬೀದರ್ |
| 15 | ಶ್ರೀ ಜೆ. ಕೃಷ್ಣ ಪಾಲೇಮಾರ್ | ದಕ್ಷಿಣ ಕನ್ನಡ |
| 16 | ಶ್ರೀ ಮುರುಗೇಶ್ ರುದ್ರಪ್ಪ ನಿರಾಣಿ | ಬಿಜಾಪುರ |
| 17 | ಶ್ರೀ ಉಮೇಶ್ ವಿ. ಕತ್ತಿ | ಬೆಳಗಾವಿ |
| 18 | ಶ್ರೀ ಎಂ.ಪಿ. ರೇಣುಕಾಚಾರ್ಯ | ಚಾಮರಾಜನಗರ |
| 19 | ಶ್ರೀ ಕಟ್ಟಾಸುಬ್ರಮಣ್ಯನಾಯ್ಡು | ಬೆಂಗಳೂರು ನಗರ (ಬೆಂಗಳೂರು ಉತ್ತರ ಜಿಲ್ಲೆಯ 14 ವಿಧಾನಸಭಾ ಕ್ಷೇತ್ರಗಳು) |
| 20 | ಕುಮಾರಿ ಶೋಭಾ ಕರಂದ್ಲಾಜೆ | ಚಿಕ್ಕಬಳ್ಳಾಪುರ |
| 21 | ಶ್ರೀ ವಿ. ಸೋಮಣ್ಣ | ತುಮಕೂರು ಮತ್ತು ಹಾಸನ |
| 22 | ಶ್ರೀ ಸಿ.ಹೆಚ್. ವಿಜಯಶಂಕರ್ | ಕೊಡಗು |
| 23 | ಶ್ರೀ ಎ. ನಾರಾಯಣಸ್ವಾಮಿ | ಕೋಲಾರ |
| 24 | ಶ್ರೀ ಎಸ್. ಎ. ರಾಮದಾಸ್ | ಮೈಸೂರು |
| 25 | ಶ್ರೀ ಸಿ.ಸಿ. ಪಾಟೀಲ್ | ಗದಗ್ |
| 26 | ಶ್ರೀ ಲಕ್ಷ್ಮಣ ಸವದಿ | ಕೊಪ್ಪಳ |
| 27 | ಶ್ರೀ ಆರ್. ಸುರೇಶ್ ಕುಮಾರ್ | ಚಿಕ್ಕಮಗಳೂರು |
| 28 | ಶ್ರೀ ಮಮ್ತಾಜ್ ಆಲಿಖಾನ್ | ಯಾದಗಿರಿ |

**ಬಿ. ಚಿಕ್ಕರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ, 1 & 2
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ

ಪಿ. ಆರ್. 2966

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಮಾರೆಪ್ಪ, ತಹಶೀಲ್ದಾರ್, ಕುಷ್ಟಗಿ ತಾಲ್ಲೂಕು, ಕೊಪ್ಪಳ ಜಿಲ್ಲೆ ಇವರ ಅಮಾನತ್ತನ್ನು ತೆರವುಗೊಳಿಸಿ ಸ್ಥಳ ನಿಯುಕ್ತಿಗೊಳಿಸುವ ಕುರಿತು.

**ಓದಲಾಗಿದೆ :** (1) ಸರ್ಕಾರದ ಆದೇಶ ಸಂಖ್ಯೆ : ಕಂಇ 58 ಎಡಿಇ 2010 ದಿನಾಂಕ : 23–09–2010

(8) ಕೆ.ಎ.ಟಿ. ಅರ್ಜಿ ಸಂಖ್ಯೆ : 6556/2010ಕ್ಕೆ ದಿನಾಂಕ : 13–10–2010ರಂದು ತಡೆಯಾಜ್ಞೆ ನೀಡಿದೆ.

(9) ದಿನಾಂಕ : 16–11–2010 ರಂದು ನಡೆದ ವೃಂದ ನಿರ್ವಹಣಾ ಪ್ರಾಧಿಕಾರದ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ : (1) ರ ಸರ್ಕಾರದ ದಿನಾಂಕ : 23–09–2010ರ ಆದೇಶದಲ್ಲಿ, ಶ್ರೀ ಶಾಮಣ್ಣ ಬಿನ್.ದುರಗಪ್ಪ ಮಾದರ್, ಕೃಷಿಕ, ಗುಡ್ಡದ ಹನುಮಸಾಗರ, ಕುಷ್ಟಗಿ ತಾಲ್ಲೂಕು ಇವರು ತಮ್ಮ ಗ್ರಾಮದ ಸರ್ವೆ ನಂ. 3/1 ರಲ್ಲಿ 4 ಎಕರೆ 31 ಗುಂಟೆ ಮತ್ತು ತನ್ನ ಅಣ್ಣನ ಮಗ ದುರಗಪ್ಪ ಬಿನ್ ಹನುಮಂತಪ್ಪ ಇದೇ ಸರ್ವೆ ನಂಬರಿನ 4 ಎಕರೆ 31 ಗುಂಟೆ ಜಮೀನಿನ ಸಾಗುವಳಿ ಚೀಟಿ ಪಡೆದುಕೊಂಡಿದ್ದು, ಸದರಿ ಜಮೀನುಗಳ

ಪೂರ್ಣ ಅಧಿಕಾರ ಹೊಂದುವ ಸಲುವಾಗಿ ಪಹಣಿಯನ್ನು ಪಡೆಯಲು ಸೂಕ್ತ ದಾಖಲೆಗಳೊಂದಿಗೆ ಅರ್ಜಿ ಸಲ್ಲಿಸಿರುವ ಕುರಿತು ಆಪಾದಿತರು ರೂ. 10,000/–ಗಳ ಲಂಚದ ಹಣವನ್ನು ಕೊಡುವಂತೆ ಒತ್ತಾಯಿಸಿದ ಸಂಬಂಧ ಕರ್ನಾಟಕ ಲೋಕಾಯುಕ್ತರು ದಿನಾಂಕ : 19–08–2010 ರಂದು ಬೀಸಿದ ಟ್ರಾಪ್ ಬಲೆಗೆ ಸಿಕ್ಕಿಬಿದ್ದ ಹಿನ್ನೆಲೆಯಲ್ಲಿ, 1957ರ ಕರ್ನಾಟಕ ನಾಗರೀಕ ಸೇವಾ (ವ.ನಿ&ಮೇ) ನಿಯಮಾವಳಿಗಳ ನಿಯಮ 10(1)(ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಮಾರೆಪ್ಪ, ತಹಶೀಲ್ದಾರ್, ಕುಷ್ಟಗಿ ತಾಲ್ಲೂಕು, ಕೊಪ್ಪಳ ಜಿಲ್ಲೆ ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ ; (2) ರಲ್ಲಿ ದಿನಾಂಕ : 13–10–2010ರ ಆದೇಶದಲ್ಲಿ, ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಶ್ರೀ ಮಾರೆಪ್ಪ, ತಹಶೀಲ್ದಾರ್ ರವರು ಸಲ್ಲಿಸಿದ್ದ ಅರ್ಜಿ ಸಂಖ್ಯೆ ; 6556/2010 ರಲ್ಲಿ ಮಧ್ಯಂತರ ಆದೇಶ ನೀಡಿ ಸರ್ಕಾರದ ಆದೇಶ ಸಂಖ್ಯೆ : ಕಂಇ 58ಎಡಿಇ 2010 ದಿನಾಂಕ : 23–09–2010ಕ್ಕೆ ಎರಡು ತಿಂಗಳವರೆಗೆ ತಡೆಯಾಜ್ಞೆ ನೀಡಿರುತ್ತದೆ. ಈ ಆದೇಶದ ಮೇರೆಗೆ ಸೇವೆಯನ್ನು ಮುಂದುವರೆಸುವಂತೆ ಶ್ರೀ ಮಾರೆಪ್ಪ, ತಹಶೀಲ್ದಾರ್ ಇವರು ಕೋರಿರುತ್ತಾರೆ. ಕುಷ್ಟಗಿ ತಹಶೀಲ್ದಾರ್ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಟ್ರಾಪ್ ಆಗಿರುವುದರಿಂದ ಪುನಃ ಅದೇ ಹುದ್ದೆಯಲ್ಲಿ ಮುಂದುವರೆಸಿದರೆ ಶ್ರೀಯುತರು ದಾಖಲೆ ಹಾಗೂ ಸಾಕ್ಷಿಗಳನ್ನು ನಾಶ ಪಡಿಸುವ ಸಾಧ್ಯತೆ ಇರುವುದರಿಂದ ಅವರನ್ನು ಕುಷ್ಟಗಿ ತಹಶೀಲ್ದಾರ್ ಹುದ್ದೆಯನ್ನು ಬಿಟ್ಟು ಬೇರೆ ಹುದ್ದೆಗೆ ನೇಮಿಸುವ ಕುರಿತು ಮೇಲೆ ಓದಲಾದ ಕ್ರಮ ಸಂಖ್ಯೆ : (3) ದಿನಾಂಕ : 16–11–2010 ರಂದು ನಡೆದ ವೃಂದ ನಿರ್ವಹಣಾ ಪ್ರಾಧಿಕಾರದ ಸಭೆಯಲ್ಲಿ ಚರ್ಚಿಸಿ ಶ್ರೀಯುತರ ಅಮಾನತ್ತನ್ನು ತೆರವುಗೊಳಿಸಿ ತಹಶೀಲ್ದಾರ್, ದೇವದುರ್ಗ ತಾಲ್ಲೂಕು, ರಾಯಚೂರು ಜಿಲ್ಲೆ ಇಲ್ಲಿನ ಹುದ್ದೆಗೆ ನೇಮಿಸಲು ತೀರ್ಮಾನಿಸಲಾಗಿರುತ್ತದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ಕಂಇ 58 ಎಡಿಇ 2010, (ಭಾ–1)**

**ಬೆಂಗಳೂರು, ದಿನಾಂಕ : 01–12–2010**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಮಾರೆಪ್ಪ, ತಹಶೀಲ್ದಾರ್ (ಪ್ರಸ್ತುತ ಅಮಾನತ್ತು) ಇವರನ್ನು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 10(5)(ಸಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅವರ ವಿರುದ್ಧದ ಲೋಕಾಯುಕ್ತ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಈ ಕೂಡಲೇ ಜಾರಿಗೆ ಬರುವಂತೆ ಅಮಾನತ್ತಿನಿಂದ ತೆರವುಗೊಳಿಸಿ ಇವರನ್ನು ತಹಶೀಲ್ದಾರ್, ದೇವದುರ್ಗ ತಾಲ್ಲೂಕು, ರಾಯಚೂರು ಜಿಲ್ಲೆ ಇಲ್ಲಿನ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಎಂ. ಎಸ್. ದೇಸಾಯಿ

ಸರ್ಕಾರದ ಉಪ ಕಾರ್ಯದರ್ಶಿ,

ಪಿ. ಆರ್. 2967 ಕಂದಾಯ ಇಲಾಖೆ (ವಿ.ನಿ. & ಸೇವೆಗಳು)

## ಕಂದಾಯ ಸಚಿವಾಲಯ

**ವಿಷಯ :** ನೂತನ ಯಾದಗಿರಿ ಜಿಲ್ಲೆಯ ಸ್ಟೀರಿಂಗ್ ಸಮಿತಿಯು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ–68–ಭೂದಾಪು–2009, ದಿನಾಂಕ : 11–12–2009

2. ಜಿಲ್ಲಾಧಿಕಾರಿ, ಯಾದಗಿರಿ ಜಿಲ್ಲೆ ಇವರ ಪತ್ರ ಸಂಖ್ಯೆ : ಸಂ/ಕಂ/ಲೆಕ್ಕ/136/2010–11, ದಿ : 28–10–2010.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ : 11–12–2009ರ ಆದೇಶದಲ್ಲಿ ಯಾದಗಿರಿ ಜಿಲ್ಲೆಯ ಪೂರ್ವ ಸಿದ್ದತೆ ಕಾರ್ಯಗಳ ಬಗ್ಗೆ ನಿರ್ಣಯಿಸಲು ಈ ಕೆಳಕಂಡ ಅಧಿಕಾರಿಗಳುಳ್ಳ ಸಮಿತಿಯನ್ನು ರಚಿಸಿ ಆದೇಶ ಹೊರಡಿಸಲಾಗಿತ್ತು.

| ಕ್ರ.ಸಂ. | ಅಧಿಕಾರಿಗಳ ಪದನಾಮ | |
|---|---|---|
| 1 | ಮಾನ್ಯ ಜಿಲ್ಲಾ ಉಸ್ತುವಾರಿ ಕಾರ್ಯದರ್ಶಿ, ಗುಲ್ಬರ್ಗಾ ಜಿಲ್ಲೆ | ಅಧ್ಯಕ್ಷರು |
| 2 | ಅವಿಭಜಿತ ಗುಲ್ಬರ್ಗಾ ಜಿಲ್ಲೆಯ ಜಿಲ್ಲಾಧಿಕಾರಿ | ಸದಸ್ಯರು |
| 3 | ಜಿಲ್ಲಾಧಿಕಾರಿಗಳು ಹಾಗೂ ಪದನಿಮಿತ್ತ ವಿಶೇಷ ಅಧಿಕಾರಿ, ಯಾದಗಿರಿ | ಸದಸ್ಯ ಕಾರ್ಯದರ್ಶಿಗಳು |
| 4 | ಅವಿಭಜಿತ ಗುಲ್ಬರ್ಗಾ ಜಿಲ್ಲೆಯ ಪೋಲಿಸ್ ವರಿಷ್ಠಾಧಿಕಾರಿ | ಸದಸ್ಯರು |
| 5 | ಅವಿಭಜಿತ ಗುಲ್ಬರ್ಗಾ ಜಿಲ್ಲೆಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ | ಸದಸ್ಯರು |
| 6 | ಅವಿಭಜಿತ ಗುಲ್ಬರ್ಗಾ ಜಿಲ್ಲೆಯ ಕಾರ್ಯನಿರ್ವಾಹಕ ಅಭಿಯಂತರರು, ಲೋಕೋಪಯೋಗಿ ವಿಭಾಗ | ಸದಸ್ಯರು |

ಮೇಲ್ಕಾಣಿಸಿದ ಸರ್ಕಾರದ ಆದೇಶ ನೂತನ ಯಾದಗಿರಿ ಜಿಲ್ಲೆಯು ಅಸ್ತಿತ್ವಕ್ಕೆ ಬರುವ ಮುಂಚೆ ರಚಿಸಿರುವುದರಿಂದ ಗುಲ್ಬರ್ಗಾ ಜಿಲ್ಲೆಯ ವಿವಿಧ ಅಧಿಕಾರಿಗಳನ್ನು ನೇಮಕ ಮಾಡಲಾಗಿದೆ. ನೂತನ ಯಾದಗಿರಿ ಜಿಲ್ಲೆಯು ದಿ : 30–12–2009 ರಿಂದ ಅಸ್ತಿತ್ವಕ್ಕೆ ಬಂದ ಹಿನ್ನೆಲೆಯಲ್ಲಿ ಆಡಳಿತದ ಹಿತದೃಷ್ಟಿಯಿಂದ ಹಾಗೂ ದಿನಾಂಕ : 23–10–2010 ರಂದು ಮಾನ್ಯ ಜಿಲ್ಲಾ ಉಸ್ತುವಾರಿ ಕಾರ್ಯದರ್ಶಿಗಳು ಹಾಗೂ ವ್ಯವಸ್ಥಾಪಕ ನಿರ್ದೇಶಕರು ಕೆ.ಯು.ಐ.ಡಿ.ಎಫ್.ಸಿ. ರವರ ಅಧ್ಯಕ್ಷತೆಯಲ್ಲಿ ಜರುಗಿದ ಸಭೆಯಲ್ಲಿ ನೀಡಿದ ಸೂಚನೆಯ ಮೇರೆಗೆ ಸ್ಟೀರಿಂಗ್ ಸಮಿತಿಯನ್ನು ಈ ಕೆಳಕಂಡಂತೆ ಪುನರ್ ರಚಿಸಲು ಮೇಲೆ (2) ರಲ್ಲಿ ಓದಲಾದ ದಿನಾಂಕ : 28–10–2010ರ ಪತ್ರದಲ್ಲಿ ಜಿಲ್ಲಾಧಿಕಾರಿ ಯಾದಗಿರಿ ಇವರು ಸರ್ಕಾರವನ್ನು ಕೋರಿರುತ್ತಾರೆ.

| ಕ್ರ.ಸಂ. | ಅಧಿಕಾರಿಗಳ ಪದನಾಮ | |
|---|---|---|
| 1 | ಮಾನ್ಯ ಜಿಲ್ಲಾ ಉಸ್ತುವಾರಿ ಕಾರ್ಯದರ್ಶಿ, ಯಾದಗಿರಿ ಜಿಲ್ಲೆ | ಅಧ್ಯಕ್ಷರು |
| 2 | ಜಿಲ್ಲಾಧಿಕಾರಿ ಯಾದಗಿರಿ | ಸದಸ್ಯ ಕಾರ್ಯದರ್ಶಿಗಳು |
| 3 | ಜಿಲ್ಲಾ ಪೋಲಿಸ ವರಿಷ್ಠಾಧಿಕಾರಿ ಯಾದಗಿರಿ | ಸದಸ್ಯರು |
| 4 | ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ ಯಾದಗಿರಿ | ಸದಸ್ಯರು |
| 5 | ಕಾರ್ಯನಿರ್ವಾಹಕ ಅಭಿಯಂತರರು ಲೋಕೋಪಯೋಗಿ ವಿಭಾಗ ಯಾದಗಿರಿ | ಸದಸ್ಯರು |

ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಆದೇಶ ಸಂಖ್ಯೆ : ಕಂಇ/68/ಭೂದಾಪು/2009 ದಿನಾಂಕ : 11–12–2009 ರ ಆದೇಶವನ್ನು ಪರಿಷ್ಕರಿಸಿ ಹೊಸದಾಗಿ ಸ್ಟೀರಿಂಗ್ ಕಮಿಟಿ ರಚಿಸುವ ಬಗ್ಗೆ ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ–47–ಭೂದಾಪು 2010, ಬೆಂಗಳೂರು, ದಿನಾಂಕ : 30–11–2010**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಹೊಸದಾಗಿ ರಚಿಸಲಾಗಿರುವ ಯಾದಗಿರಿ ಜಿಲ್ಲೆಯ ಪೂರ್ವ ಸಿದ್ಧತೆ ಕಾರ್ಯಗಳ ಬಗ್ಗೆ ನಿರ್ಣಯಿಸಲು ಈ ಕೆಳಕಂಡ ಅಧಿಕಾರಿಗಳ ಸ್ಟೀರಿಂಗ್ ಸಮಿತಿಯನ್ನು (Steering Committee) ಪುನರ್ ರಚಿಸಿ ಆದೇಶಿಸಿದೆ.

| ಕ್ರ.ಸಂ. | ಅಧಿಕಾರಿಗಳ ಪದನಾಮ | |
|---|---|---|
| 1 | ಮಾನ್ಯ ಜಿಲ್ಲಾ ಉಸ್ತುವಾರಿ ಕಾರ್ಯದರ್ಶಿ, ಯಾದಗಿರಿ ಜಿಲ್ಲೆ | ಅಧ್ಯಕ್ಷರು |
| 2 | ಜಿಲ್ಲಾಧಿಕಾರಿ ಯಾದಗಿರಿ | ಸದಸ್ಯ ಕಾರ್ಯದರ್ಶಿಗಳು |
| 3 | ಜಿಲ್ಲಾ ಪೋಲಿಸ ವರಿಷ್ಠಾಧಿಕಾರಿ ಯಾದಗಿರಿ | ಸದಸ್ಯರು |
| 4 | ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ ಯಾದಗಿರಿ | ಸದಸ್ಯರು |
| 5 | ಕಾರ್ಯನಿರ್ವಾಹಕ ಅಭಿಯಂತರರು ಲೋಕೋಪಯೋಗಿ ವಿಭಾಗ ಯಾದಗಿರಿ | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ವಿ. ಚೌಕಿಮಠ**

ಸರ್ಕಾರದ ಆಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂಮಾಪನ)

ಪಿ. ಆರ್. 2968

## ಕಂದಾಯ ಸಚಿವಾಲಯ

**ವಿಷಯ :** ಬೆಳಗಾವಿ ಜಿಲ್ಲೆ, ಅಥಣಿ ತಾಲ್ಲೂಕಿನ ಶ್ರೀ ಹಾಮುಲಾಲ್ ದೇವಾಲಯವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರ್ಪಡೆ ಮಾಡುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪತ್ರ ಸಂಖ್ಯೆ: ಎಡಿಎಂ 5 ಸಿಆರ್ 32/2010–11 ದಿನಾಂಕ: 21.10.2010

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪತ್ರ ದಿನಾಂಕ: 21.10.2010ರಲ್ಲಿ ಬೆಳಗಾವಿ ಜಿಲ್ಲೆ, ಅಥಣಿ ತಾಲ್ಲೂಕಿನ ಶ್ರೀ ಹಾಮುಲಾಲ್ ದೇವಾಲಯವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸುವಂತೆ ದೇವಸ್ಥಾನದ ಕಾರ್ಯದರ್ಶಿಯವರು ಮನವಿ ಸಲ್ಲಿಸಿ, ಈ ಕುರಿತಂತೆ ಜಿಲ್ಲಾಧಿಕಾರಿಗಳು ಬೆಳಗಾವಿ ಜಿಲ್ಲೆರವರು ಈ ಸಂಸ್ಥೆಯು ಸಾರ್ವಜನಿಕವಾಗಿದ್ದು, ಸಂಸ್ಥೆಯಲ್ಲಿ ಜೈನ ಲಿಂಗಾಯಿತ್ ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದ ಜನರು ಸಮಿತಿಯಲ್ಲಿದ್ದು, ಎಲ್ಲಾ ಹಬ್ಬಗಳನ್ನು ಹಾಗೂ ಶ್ರಾವಣ ಮಾಸದ ಪೂಜೆ ಇನ್ನಿತರ ಕಾರ್ಯಕ್ರಮಗಳು ಇಲ್ಲಿ ನಡೆಯುತ್ತಿರುವುದರಿಂದ ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿ ಕಾಯ್ದೆ 1997ರ ಸೆಕ್ಷನ್ 1(4) (II) ರನ್ವಯ ಒಂದು ಧಾರ್ಮಿಕ ಪಂಗಡವು ಸ್ಥಾಪಿಸಿ ವ್ಯವಸ್ಥೆಗೊಳಿಸಿ ನಡೆಸುತ್ತಿರುವ ಅಥವಾ ನಿರ್ವಹಿಸುತ್ತಿರುವ ಪರಿವ್ಯಾಪ್ತಿಯಲ್ಲಿ ಬರುವುದಿಲ್ಲವೆಂದು ಸದರಿ ಕಾಯ್ದೆಯ ಸೆಕ್ಷನ್ 23(ಇ) ಅನ್ವಯ ಮುಂಬೈ ಸಾರ್ವಜನಿಕ ಜಿಮ್ಮೆಗಳ ಕಾಯ್ದೆ 1950ರ ಪ್ರಕಾರ ನೋಂದಣಿ ಆದ ದೇವಸ್ಥಾನಗಳನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸಲು ಅವಕಾಶವಿರುವುದರಿಂದ ಈ ದೇವಸ್ಥಾನದಲ್ಲಿ ಎಲ್ಲಾ ಜನಾಂಗದವರು ಸೇರಿ ಆಡಳಿತವನ್ನು ನಿರ್ವಹಿಸುತ್ತಿರುವುದರಿಂದ ಇದನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಹಿಂದಿನ ಬಾಂಬೆ ಪಬ್ಲಿಕ್ ಟ್ರಸ್ಟ್ ಆಕ್ಟ್ 1950 ಅನ್ವಯ ಸಂಸ್ಥೆಯನ್ನು ನೋಂದಣಿ ಮಾಡಿದಾಗ ನ್ಯಾಸದ ಉದ್ದೇಶಗಳಲ್ಲಿ ಅಥವಾ ಉತ್ತರಾಧಿಕಾರದ ನೇಮಕಾತಿ ಕಲಂನಲ್ಲಿ ಈ ಸಂಸ್ಥೆಯು ಒಂದು ನಿರ್ದಿಷ್ಟ ಪಂಗಡಕ್ಕೆ ಸೇರಿದೆ ಎಂಬ ಬಗ್ಗೆ ಯಾವುದೇ ನಮೂದು ಇರುವುದಿಲ್ಲ. ಆದುದರಿಂದ ಜಿಲ್ಲಾಧಿಕಾರಿಗಳ ಪ್ರಸ್ತಾವನೆಯಂತೆ ಬೆಳಗಾವಿ ಜಿಲ್ಲೆಯ ಅಥಣಿ ತಾಲ್ಲೂಕಿನ ಶ್ರೀ ಹಾಮುಲಾಲ್ ದೇವಾಲಯವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸಿ, ಪ್ರಕಟಣೆ ಹೊರಡಿಸುವಂತೆ ಸರ್ಕಾರಕ್ಕೆ ಕೋರಿಕೆ ಸಲ್ಲಿಸಿರುತ್ತಾರೆ.

ಆಯುಕ್ತರು ಧಾರ್ಮಿಕ ದತ್ತಿ ಇಲಾಖೆರವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಕಂಇ 102 ಮುಆಬಿ 2010, ಬೆಂಗಳೂರು, ದಿನಾಂಕ: 04.12.2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆ, ಅಥಣಿ ತಾಲ್ಲೂಕಿನ ಶ್ರೀ ಹಾಮುಲಾಲ್ ದೇವಾಲಯವು ಸಾರ್ವಜನಿಕವಾಗಿದ್ದು, ಈ ಸಂಸ್ಥೆಯಲ್ಲಿ ಎಲ್ಲಾ ಜನಾಂಗದವರು ಸೇರಿ ಆಡಳಿತವನ್ನು ನಿರ್ವಹಿಸುತ್ತಿರುವುದರಿಂದ ಈ ದೇವಾಲಯವನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997ರ ಕಲಂ 23 (ಇ) ರನ್ವಯ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್ 2972

**ಎಲ್.ಎಸ್. ಶ್ರೀಕಂಠಬಾಬು**

ಪೀಠಾಧಿಕಾರಿ

ಕಂದಾಯ ಇಲಾಖೆ (ಮುಜರಾಯಿ)

**ಕಂದಾಯ ಸಚಿವಾಲಯ**

**ವಿಷಯ** : ಶ್ರೀ ಕೆ. ಗುರುಮೂರ್ತಿ, ನಿವೃತ್ತ ತಹಶೀಲ್ದಾರರು ಇವರಿಗೆ ಮೂರು ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ** : (1) ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಇವರ ಪತ್ರ ಸಂಖ್ಯೆ: ಪ್ರಾಆಕ/ಸಿಬ್ಬಂದಿ/ಸಿಆರ್/109/2006–07 ದಿನಾಂಕ: 4–12–2009.

(2) ಮಹಾಲೇಖಪಾಲರು, ಕರ್ನಾಟಕ ರವರ ಪತ್ರ ಸಂಖ್ಯೆ: GE1/R1/pf-185/ G-128–126/681 ದಿನಾಂಕ: 2–9–2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1) ಪ್ರಾದೇಶಿಕ ಆಯುಕ್ತರ ದಿನಾಂಕ: 4–12–2009ರ ಪತ್ರದಲ್ಲಿ, ಶ್ರೀ.ಕೆ. ಗುರುಮೂರ್ತಿ, ನಿವೃತ್ತ ತಹಶೀಲ್ದಾರ್, ಹೊನ್ನಾಳಿ ತಾಲ್ಲೂಕು ಇವರಿಗೆ ದಿನಾಂಕ: 1–4–2005, 1–4–2006 ಮತ್ತು 1–4–2007 ರಿಂದ ಅನ್ವಯವಾಗುವಂತೆ ರೂ. 6000–11200 ರ ವೇತನ ಶ್ರೇಣಿಯಲ್ಲಿ ಕ್ರಮವಾಗಿ ಮೂರು ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡುವ ಕುರಿತಂತೆ, ಇವರು ರೂ. 6000–11200 ರ ವೇತನ ಶ್ರೇಣಿಯಲ್ಲಿ ವೇತನ ಶ್ರೇಣಿಯ ಗರಿಷ್ಠ ಹಂತವನ್ನು ತಲುಪಿದ್ದು, ಇವರಿಗೆ ದಿನಾಂಕ: 1–4–2005ರಿಂದ ವೇತನ ಬಡ್ತಿಗಳನ್ನು ನೀಡಿರುವುದಿಲ್ಲ. ಸದರಿಯವರ ವಿರುದ್ಧ ಯವುದೇ ಇಲಾಖಾ ವಿಚಾರಣೆಗಳು ಬಾಕಿ ಇರುವುದಿಲ್ಲ. ಆದ್ದರಿಂದ, ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 3 ಎಸ್‌ಆರ್‌ಪಿ 96 ದಿನಾಂಕ: 18–3–1996ರನ್ವಯ ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2) ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು ರವರ ದಿನಾಂಕ: 2–9–2010ರ ಪತ್ರದಲ್ಲಿ, ಶ್ರೀ ಕೆ. ಗುರುಮೂರ್ತಿ, ನಿವೃತ್ತ ತಹಶೀಲ್ದಾರ್ ರವರು ದಿನಾಂಕ: 30–4–2007ರಂದು ನಿವೃತ್ತಿ ಹೊಂದಿದ್ದು, ಅವರು ದಿನಾಂಕ: 1–4–2004ರಿಂದ ವೇತನ ಶ್ರೇಣಿ ರೂ.6000–11200ರಲ್ಲಿ ಗರಿಷ್ಠ ವೇತನಕ್ಕೆ ತಲುಪಿದ್ದು, ದಿನಾಂಕ: 1–4–2005ರಿಂದ 1ನೇ ಸ್ಥಗಿತ ವೇತನ ಬಡ್ತಿ, ದಿನಾಂಕ: 1–4–2006ರಿಂದ 2ನೇ ಸ್ಥಗಿತ ವೇತನ ಬಡ್ತಿ, ದಿನಾಂಕ: 1–4–2007ರಿಂದ 3ನೇ ಸ್ಥಗಿತ ವೇತನ ಬಡ್ತಿಗೆ ಅರ್ಹರಿರುವುದಾಗಿ ತಿಳಿಸಿರುತ್ತಾರೆ.

ಮೇಲ್ಕಂಡಂತೆ ಶ್ರೀ.ಕೆ. ಗುರುಮೂರ್ತಿ, ನಿವೃತ್ತ ತಹಶೀಲ್ದಾರ್ ಇವರಿಗೆ ಮೂರು ಸ್ಥಗಿತ ವೇತನ ಬಡ್ತಿ ಮಂಜೂರು ಮಾಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 487 ಎಎಸ್‌ಡಿ 2010, ಬೆಂಗಳೂರು, ದಿನಾಂಕ: 7–12–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಕೆ. ಗುರುಮೂರ್ತಿ, ನಿವೃತ್ತ ತಹಶೀಲ್ದಾರರು ಇವರು ದಿನಾಂಕ: 30–4–2007 ರಂದು ನಿವೃತ್ತಿ ಹೊಂದಿದ್ದು, ಅವರು ದಿನಾಂಕ: 1–4–2004ರಿಂದ ವೇತನ ಶ್ರೇಣಿ ರೂ. 6000–11200ರಲ್ಲಿ ಗರಿಷ್ಠ ವೇತನಕ್ಕೆ ತಲುಪಿದ್ದು, ಶ್ರೀಯುತರಿಗೆ ಈ ಕೆಳಕಂಡಂತೆ ಮೂರು ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡಿ ಸರ್ಕಾರವು ಆದೇಶಿಸಿದೆ.

(1) ದಿನಾಂಕ: 1–4–2005 ರಿಂದ ಮೊದಲನೇ ಸ್ಥಗಿತ ವೇತನ ಬಡ್ತಿ

(2) ದಿನಾಂಕ: 1–4–2006 ರಿಂದ ಎರಡನೇ ಸ್ಥಗಿತ ವೇತನ ಬಡ್ತಿ

(3) ದಿನಾಂಕ: 1–4–2007 ರಿಂದ ಮೂರನೇ ಸ್ಥಗಿತ ವೇತನ ಬಡ್ತಿ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಬಿ.ಸಸಾಲಟ್ಟಿ**

ಪಿ.ಆರ್ 2973

**ಸರ್ಕಾರದ ಅಧೀನ ಕಾರ್ಯದರ್ಶಿ**

ಕಂದಾಯ ಇಲಾಖೆ (ಸೇ–3)

**ಕಂದಾಯ ಸಚಿವಾಲಯ**

**ವಿಷಯ** : ಬಾಬಾ ಅಣು ಸಂಶೋಧನಾ ಕೇಂದ್ರ ಅಣುಶಕ್ತಿ ಇಲಾಖೆಯ ಸ್ಪೆಷಲ್ ಮೆಟಿರಿಯಲ್ ಎನ್‌ರಿಚ್‌ಮೆಂಟ್ ಫೆಸಿಲಿಟಿ ಕೇಂದ್ರ ಸ್ಥಾಪನೆಗಾಗಿ ಚಳ್ಳಕೆರೆ ತಾಲ್ಲೂಕು, ಉಳ್ಳರ್ತಿ ಕಾವಲ್ ಸ.ನಂ.1ರಲ್ಲಿ 1410–00 ಎಕರೆ ಹಾಗೂ ಖುದಾಪುರ ಗ್ರಾಮದ ಸ.ನಂ 47ರಲ್ಲಿ 400–00 ಎಕರೆ ಒಟ್ಟು 1810–00 ಎಕರೆ ಜಮೀನನ್ನು ಮಂಜೂರು ಮಾಡುವ ಬಗ್ಗೆ .

**ಓದಲಾಗಿದೆ** : ಜಿಲ್ಲಾಧಿಕಾರಿಗಳು ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ ರವರ ಪತ್ರ ಸಂಖ್ಯೆ: ಎಲ್‌ಎನ್‌ಡಿಸಿಆರ್/243/2009–10 ದಿ: 27/31–3–2010.

**ಪ್ರಸ್ತಾವನೆ:**

ಜಿಲ್ಲಾಧಿಕಾರಿಗಳು ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ, ರವರು ಮೇಲೆ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸುತ್ತಾ ಬಾಬಾ ಅಣು ಸಂಶೋಧನಾ ಕೇಂದ್ರವು ಕೇಂದ್ರದ ಒಂದು ವಿಸ್ತರಣಾ ಅಂಗವಾಗಿ 12 ಮತ್ತು 13ನೇ ಯೋಜನಾ ವರ್ಷದಲ್ಲಿ **ಸ್ಪೆಷಲ್ ಮೆಟಿರಿಯಲ್ ಎನ್‌ರಿಚ್‌ಮೆಂಟ್ ಫೆಸಿಲಿಟಿ/ Special Material Enrichment Facility** ಯೊಜನೆ ಆರಂಭಿಸಲು ಉದ್ದೇಶಿಸಿದ್ದು, ಚಿತ್ರುದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು, ಉಳ್ಳರ್ತಿ ಕಾವಲ್ ಹಾಗೂ ಖುದಾಪುರ ಗ್ರಾಮದಲ್ಲಿ ಕ್ರಮವಾಗಿ 1500–00 ಎಕರೆ ಹಗೂ 600–00 ಎಕರೆ ಜಮೀನು ಯೋಜಿತ ಉದ್ದೇಶಕ್ಕೆ ಭೂಸ್ವಾಧೀನ ಪಡಿಸಿಕೊಳ್ಳಲು ಯೋಜನಾ ನಿರ್ದೇಶಕರು ಬಾಬಾ ಅಣು ಸಂಶೋಧನಾ ಕೇಂದ್ರ ಮೈಸೂರು ರವರ ಪತ್ರ ಸಂಖ್ಯೆ: ಆರ್‌ಎಂಪಿ/ಎಡಿಎ/ಸಿ–60/2009 ದಿ: 14–9–2009 ಮತ್ತು 24–9–2009ರ ಪತ್ರಗಳಲ್ಲಿ ಸಕ್ಷಮ ಪ್ರಾಧಿಕಾರದಿಂದ ಅನುಮತಿ ದೊರೆತಿರುವುದಾಗಿ ತಿಳಿಸಿ, ಸಂಸ್ಥೆಯ ವಿಶೇಷ ವಿಜ್ಞಾನಿಗಳು, ಯೋಜನಾ ನಿರ್ದೇಶಕರು ಹಾಗೂ ಇತರರು ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲ್ಲೂಕು, ಉಳ್ಳರ್ತಿ ಕಾವಲ್ ಸ.ನಂ1ರ ಮತ್ತು ಖುದಾಪುರ ಗ್ರಾಮದ ಸ.ನಂ.47ರ ಜಮೀನುಗಳ ಪರಿಶೀಲನೆ ನಡೆಸಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಕರ್ನಾಟಕ ವಿದ್ಯುತ್ ಪ್ರಸರಣಾ ನಿಗಮ, ಲೋಕೋಪಯೋಗಿ ಬಂದರು ಮತ್ತು ಒಳನಾಡು ಸಾರಿಗೆ ಇಲಾಖೆಯ ಅಧಿಕಾರಿಗಳೊಂದಿಗೆ ಸಮಾಲೋಚನೆ ನಡೆಸಿರುತ್ತಾರೆ ಎಂದು ವರದಿ

ಮಾಡಿರುತ್ತಾರೆ. ಯೋಜನಾ ನಿರ್ದೇಶಕರು ಬಾಬಾ ಅಣು ಸಂಶೋಧನಾ ಕೇಂದ್ರರವರು ಭೂಸ್ವಾಧೀನ ಪಡಿಸಿಕೊಳ್ಳುವ ಜಮೀನನ್ನು ನಿರ್ಭಂದಿತ ಪ್ರದೇಶವೆಂದು ಘೋಷಿಸುವ ಬಗ್ಗೆ ರಾಜ್ಯ ಲೋಕೋಪಯೋಗಿ ರಸ್ತೆ, ಚಳ್ಳಕೆರೆಯಿಂದ-7 ರಿಂದ ಆಂಧ್ರ ಪ್ರದೇಶದ ಕಲ್ಯಾಣ ದುರ್ಗದ ರಸ್ತೆ ಪ್ರಸ್ತಾಪಿತ ಜಮೀನಿನ ಮಧ್ಯೆ ಹಾದುಹೋಗುತ್ತಿದ್ದು, ಇದನ್ನು ಸ್ಥಳಾಂತರಿಸುವ ಬಗ್ಗೆ ನೀರಿನ ಪೂರೈಕೆ, ವಿದ್ಯುತ್ ಪೂರೈಕೆ ಹಾಗೂ ಕುರಿ ಫಾರಂ ಇರುವ 158-00 ಎಕರೆ ಪ್ರದೇಶದಲ್ಲಿ ಬರುವ ಶಿಥಿಲಗೊಂಡ ಕಟ್ಟಡಗಳನ್ನು ಸ್ಥಳಾಂತರಿಸುವ ಬಗ್ಗೆ ಮಾಹಿತಿ ಕೋರಿದ್ದು, ಈ ಬಗ್ಗೆ ಸ್ಪಷ್ಟೀಕರಣ ನೀಡಲಾಗಿದೆ ಹಾಗೂ ಕಾಮಗಾರಿಗಳ ಪೂರಕ ಅಂದಾಜು ಪಟ್ಟಿಗಳನ್ನು ಕಳುಹಿಸಿಕೊಡಲಾಗಿದೆ. ಎಂಬುದಾಗಿ ವರದಿ ಮಾಡಿದ್ದಾರೆ.

ಮುಂದುವರಿದು ಉಳ್ಳರ್ತಿ ಕಾವಲ್ ಸ.ನಂ.1ರಲ್ಲಿ 1410-00 ಎಕರೆ, ಖುದಾಪುರ ಗ್ರಾಮದ ಸ.ನಂ.47ರಲ್ಲಿ 400-00 ಎಕರೆ ಒಟ್ಟು 1810-00 ಎಕರೆ ಜಮೀನನ್ನು ಬಾಬಾ ಅಣು ಸಂಶೋಧನಾ ಕೇಂದ್ರಕ್ಕೆ ಒದಗಿಸಲು ತೀರ್ಮಾನಿಸಲಾಗಿದ್ದು, ಸದರಿ ಜಮೀನಿಗೆ ಸಂಸ್ಥೆಯವರು ಸಂದಾಯ ಮಾಡಬೇಕಾದ ಮೌಲ್ಯ, ಸಾದಿಲ್ವಾರು, ಆಡಳಿತಾತ್ಮಕ ಹಾಗೂ ಮೋಜಣಿ ವೆಚ್ಚ, ಇತರೆ ನೀರು, ವಿದ್ಯುತ್ ರಸ್ತೆ, ಸ್ಥಳಾಂತರಗಳಿಗೆ ಹಾಗೂ ಇತರ ಬಾಬುಗಳಿಗೆ ಈ ಕೆಳಕಂಡಂತೆ ವೆಚ್ಚ ಭರಿಸಬೇಕಾಗಿದ್ದು, ಬಾಬಾ ಅಣು ಸಂಶೋಧನಾ ಕೇಂದ್ರದವರು ವೆಚ್ಚ ಭರಿಸಲು ಸಹಮತ ನೀಡಿರುವ ಬಗ್ಗೆ ವರದಿ ಮಾಡಿದ್ದಾರೆ:-

| **ಕ್ರಸಂ** | **ಬಾಬುಗಳು** | **ಬಾಬಾ ಅಣು ಸಂಶೋಧನಾ ಕೇಂದ್ರದವರು ಭರಿಸಬೇಕಾದ ಹಣ (ರೂ. ಲಕ್ಷಗಳಲ್ಲಿ)** |
|---|---|---|
| 1 | ಪ್ರಸ್ತಾಪಿತ ಜಮೀನಿನ ಮೌಲ್ಯ<br>ಉಳ್ಳರ್ತಿ ಕಾವಲ್ ಸ.ನಂ.1 1410-00 ಎಕರೆ ರೂ 35,000/- ದಂತೆ ಎಕರೆಗೆ ಖುದಾಪುರ ಸ.ನಂ.47 400-00 ಎಕರೆ | 633.50 |
| 2 | ಅ) ಹಾಲಿ ಇರುವ ರಸ್ತೆಯ ಸ್ಥಳಾಂತರ ಹಾಗೂ ಹೊಸ ರಸ್ತೆ ನಿರ್ಮಾಣ<br>ಆ) ಕುರಿ ಫಾರಂ ನಲ್ಲಿನ ಕಟ್ಟಡ ಇತರೆ ಬಳಕೆ ಸಾಮಗ್ರಿಗಳ ಸ್ಥಳಾಂತರ<br>ಇ) ರಸ್ತೆ ಅಗಲೀಕರಣ | 1200.00<br>250.00<br>600.00 |
| 3 | ನೀರು ಪೂರೈಕೆ | 2229.06 |
| 4 | 200/11 ಕೆ.ವಿ ವಿದ್ಯುತ್ ಮಾರ್ಗ | 994.11 |
| 5 | ಸಾಧಿಲ್ವಾರು, ಆಡಳಿತಾತ್ಮಕ ಹಾಗೂ ಮೋಜಣಿ ವೆಚ್ಚ ಭೂಮಿಯ ಒಟ್ಟು ಮೌಲ್ಯದ ಶೇ 1.5 | 9.5025 |
| | **ಒಟ್ಟು** | **5916.1725** |

ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ: 31 ಎಲ್‌ಜಿಸಿ 2010, ಬೆಂಗಳೂರು ದಿನಾಂಕ: 10-12-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು, ಉಳ್ಳರ್ತಿ ಕಾವಲ್ ಸ.ನಂ.1 ರಲ್ಲಿ 1410-00 ಎಕರೆ ಮತ್ತು ಖುದಾಪುರ ಗ್ರಾಮದ ಸ.ನಂ.47ರಲ್ಲಿನ 400-00 ಎಕರೆ ಒಟ್ಟು 1810.00 ಎಕರೆ ಅಮೃತ್ ಮಹಲ್ ಕಾವಲ್ ಜಮೀನನ್ನು, ಕರ್ನಾಟಕ ಭೂಕಂದಾಯ ನಿಯಮಗಳು 1966ರ ನಿಯಮ-97(4)ರಡಿಯಲ್ಲಿನ ಅವಕಾಶದಂತೆ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ, ಸದರಿ ಜಮೀನಿನ ಪ್ರಚಲಿತ ಮಾರ್ಗಸೂಚಿ ದರ ಎಕರೆ ಒಂದಕ್ಕೆ ರೂ.35,000/- ಮತ್ತು ಸದರಿ ಜಮೀನಿನ ಸರ್ವೆ ಕಾರ್ಯ, ಸಾದಿಲ್ವಾರು ವೆಚ್ಚ ಮತ್ತು ಆಡಳಿತಾತ್ಮಕ ವೆಚ್ಚಕ್ಕಾಗಿ 1.5% ದರವನ್ನು ಒಳಗೊಂಡಂತೆ ಇತರೆ ಬಾಬ್ತು ಒಟ್ಟು ರೂ 5916.1725 ಲಕ್ಷಗಳನ್ನು ವಿಧಿಸಿ, ಬಾಬಾ ಅಣು ಸಂಶೋಧನಾ ಕೇಂದ್ರ ಇವರಿಗೆ ಮಂಜೂರು ಮಾಡಿ ಆದೇಶಿಸಿದೆ.

ಈ ಆದೇಶವನ್ನು ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆಯವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಪಸಂಮಿ:09: ಅಮಾಭೂ: 2010 ದಿ: 4-11-2010ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಜಿ. ಲಕ್ಷ್ಮೀನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ ಮಂಜೂರಾತಿ-3)

ಪಿ.ಆರ್ 2974

## ಕಂದಾಯ ಸಚಿವಾಲಯ

**ವಿಷಯ** : ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು, ತಳುಕು ಹೋಬಳಿ, ಉಳ್ಳರ್ತಿ ಕಾವಲ್ ಸ.ನಂ. 1ರಲ್ಲಿ 250-00 ಎಕರೆ ಮತ್ತು ಖುದಾಪುರ ಗ್ರಾಮದ ಸ.ನಂ. 47ರಲ್ಲಿ 50.00 ಎಕರೆ ಜಮೀನನ್ನು ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಯಮಿತ ನಿಗಮಕ್ಕೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ** : ಜಿಲ್ಲಾಧಿಕಾರಿಗಳು ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ ರವರ ಪತ್ರ ಸಂಖ್ಯೆ: ಎಲ್‌ಎನ್‌ಡಿಸಿಆರ್/11/09-10 ದಿ: 24-5-2010

**ಪ್ರಸ್ತಾವನೆ:**

ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ ನಿಯಮಿತ ಬೆಂಗಳೂರು ರವರು ಚಿತ್ರದುರ್ಗ ಜಿಲ್ಲೆಯಲ್ಲಿ ಕೈಗಾರಿಕೆಗಳಿಗೆ ಪ್ರೋತ್ಸಾಹ ನೀಡಲು ಹಿಂದುಳಿದ ಪ್ರದೇಶಗಳಲ್ಲಿ ಕೈಗಾರಿಕಾ ವಸಾಹತುಗಳನ್ನು ಸ್ಥಾಪಿಸಲು ನಿಗಮಕ್ಕೆ ಅನುಕೂಲವಾಗಲು

ಲಭ್ಯವಿರುವ ಸರ್ಕಾರಿ ಜಮೀನನ್ನು ಮಂಜೂರು ಮಾಡಲು ಕೋರಿಕೊಂಡಿರುವ ಹಿನ್ನೆಲೆಯಲ್ಲಿ ಜಿಲ್ಲಾಧಿಕಾರಿಗಳು ಚಿತ್ರದುರ್ಗ ರವರು ಮೇಲೆ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ವರದಿ ಮಾಡುತ್ತಾ, ಉಳ್ಳರ್ತಿ ಕಾವಲ್ ಸ.ನಂ. 1ರಲ್ಲಿ 2143.36 ಎಕರೆ ಇದ್ದು ಇದರಲ್ಲಿ ಬಾಬಾ ಅಣು ಸಂಶೋಧನೆ ಕೇಂದ್ರಕ್ಕೆ 1410.00 ಎಕರೆ, ಇಸ್ರೋ ಸಂಸ್ಥೆಗೆ 473.20 ಎಕರೆ ಜಮೀನು ಮಂಜೂರಾತಿಗೆ ಪ್ರಸ್ತಾಪಿಸಲಾಗಿದೆ. ಇದೇ ಸ.ನಂ.ನಲ್ಲಿ 250.00 ಎಕರೆ ಜಮೀನನ್ನು ಮತ್ತು ಖುದಾಪುರ ಗ್ರಾಮದ ಸ.ನಂ 47ರಲ್ಲಿ 50.00 ಎಕರೆ ಜಮೀನನ್ನು ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಮಂಜೂರು ಮಾಡಬಹುದೆಂದು ವರದಿಸಿರುತ್ತಾರೆ. ಉಭಯ ಗ್ರಾಮಗಳಲ್ಲಿ ಖುಷ್ಕಿ ಜಮೀನಿನ ಮಾರ್ಗಸೂಚಿ ಬೆಲೆ ಎಕರೆ ಒಂದಕ್ಕೆ ರೂ.35,000/– ಇರುತ್ತದೆಂದು ವರದಿಸಿರುತ್ತಾರೆ.

ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ: 46 ಎಲ್‌ಜಿಸಿ 2010, ಬೆಂಗಳೂರು ದಿನಾಂಕ: 10–12–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು, ತಳುಕು ಹೋಬಳಿ, ಉಳ್ಳರ್ತಿ ಕಾವಲ್ ಸ.ನಂ.1ರಲ್ಲಿ 250–00 ಎಕರೆ ಮತ್ತು ಖುದಾಪುರ ಗ್ರಾಮದ ಸ.ನಂ. 47ರಲ್ಲಿ 50–00 ಎಕರೆ ಅಮೃತ್ ಮಹಲ್ ಕಾವಲ್ ಜಮೀನನ್ನು ಕರ್ನಾಟಕ ಭೂಕಂದಾಯ ನಿಯಮಗಳು 1966ರ ನಿಯಮ 97(4)ರಡಿಯಲ್ಲಿನ ಅವಕಾಶದಂತೆ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ, ಕರ್ನಾಟಕ ಭೂಮಂಜೂರಾತಿ ನಿಯಮಗಳು 1969ರ ನಿಯಮ 20(1)(ಸಿ) ರನ್ವಯ, ಸದರಿ ಜಮೀನಿನ ಪ್ರಚಲಿತ ಮಾರ್ಗಸೂಚಿ ದರ ಎಕರೆ ಒಂದಕ್ಕೆ ರೂ. 35,000/– ದರದ ಶೇಕಡ 50ರಷ್ಟು ಅಂದರೆ ಎಕರೆ ಒಂದಕ್ಕೆ ರೂ.17,500/–ದರ ವಿಧಿಸಿ, ಮತ್ತು ಸದರಿ ಜಮೀನಿನ ಸರ್ವೆ ಕಾರ್ಯ, ಸಾದಿಲ್ವಾರು ವೆಚ್ಚ ಮತ್ತು ಆಡಳಿತಾತ್ಮಕ ವೆಚ್ಚಕ್ಕಾಗಿ 1.5% ದರ ವಿಧಿಸಿ, ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಮಂಜೂರು ಮಾಡಲು ಆದೇಶಿಸಿದೆ.

ಈ ಆದೇಶವನ್ನು ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆಯವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಪಸಂಮಿ:09: ಅಮಾಭೂ: 2010 ದಿ: 4–11–2010ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಜಿ. ಲಕ್ಷ್ಮೀನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್ 2975 ಕಂದಾಯ ಇಲಾಖೆ (ಭೂ ಮಂಜೂರಾತಿ–3)

## ಸಹಕಾರ ಸಚಿವಾಲಯ

**ವಿಷಯ :** ಶ್ರೀ ನರಸಿಂಹಸ್ವಾಮಿ ವಿದ್ಯಾ –ಸಂಸ್ಥೆ (ರಿ), ಮಾದೇನಹಳ್ಳಿ, ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ ಈ ಸಂಸ್ಥೆಗೆ ಆಡಳಿತಾಧಿಕಾರಿಗಳನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ :**

1. ಜಿಲ್ಲಾ ನೋಂದಣಾಧಿಕಾರಿಗಳು, ತುಮಕೂರು ಜಿಲ್ಲೆರವರ ಪತ್ರ ಸಂಖ್ಯೆ : ಜಿನೋತು/ ಎಸ್‌ಓಸಿ/14/82–83 ದಿನಾಂಕ : 23–2–2008.
2. ಸರ್ಕಾರದ ಕಾರಣ ಕೇಳುವ ನೋಟೀಸು ಸಂಖ್ಯೆ : ಕಂಇ 17 ಮುನೋಸೊ 2008, ದಿನಾಂಕ : 30–4–2008.
3. ಸರ್ಕಾರದ ಪತ್ರ ಸಂಖ್ಯೆ : ಸಇ 578 ಸಹಕಾರ–ಡಿ 2008/ಕಂಇ 17 ಮುನೋಸೋ 2008, ದಿನಾಂಕ : 11–7–2008.
4. ಸಹಕಾರ ಸಂಘಗಳ ಅಪರ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ), ಬೆಂಗಳೂರು ಇವರ ಪತ್ರ ಸಂಖ್ಯೆ : ಆರ್‌ಸಿಎಸ್/ಎಡಿಎಂ/33/ಎಸ್‌ಓಆರ್/2008–09 ದಿನಾಂಕ : 10–06–2009.
5. ಶ್ರೀ ಬಿ. ಹನುಮಂತಯ್ಯ, ಸಂಸ್ಥೆಯ ಹಿಂದಿನ ಅಧ್ಯಕ್ಷರು ಸಲ್ಲಿಸಿರುವ ದಿನಾಂಕ : 9–7–2009 ರ ಮನವಿ.
6. ಸರ್ಕಾರದ ಪತ್ರ ಸಂಖ್ಯೆ : ಸಇ 118 ಸಸಂನೋ 2008, ದಿನಾಂಕ : 4–8–2009.
7. ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ರವರ ಪತ್ರ ಸಂಖ್ಯೆ : ಡಿಆರ್‌ಟಿ/ಎಸ್ ಓಸಿ/14/2008–09, ದಿನಾಂಕ : 3–6–2010 ಮತ್ತು ಸಹಕಾರ ಸಂಘಗಳ ಅಪರ ನಿಬಂಧಕರು, ಬೆಂಗಳೂರು ರವರ ಪತ್ರ ದಿನಾಂಕ : 3–6–2010.
8. ಸರ್ಕಾರದ ಪತ್ರ ಸಂಖ್ಯೆ : ಸಇ 118 ಸಸಂನೋ 2008, ದಿನಾಂಕ 13–08–2009.
9. ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ರವರ ಪತ್ರ ಸಂಖ್ಯೆ: ಆರ್‌ಸಿಎಸ್/ ಎಡಿಎಂ/33/ಎಸ್‌ಓಆರ್/08–09, ದಿನಾಂಕ : 20–10–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ : (1) ರ ದಿನಾಂಕ : 23–2–2008 ರ ತುಮಕೂರು ಜಿಲ್ಲಾ ನೋಂದಣಾಧಿಕಾರಿಗಳ ಪತ್ರದಲ್ಲಿ, ಶ್ರೀ ನರಸಿಂಹಸ್ವಾಮಿ ವಿದ್ಯಾಸಂಸ್ಥೆ (ರಿ), ಮಾದೇನಹಳ್ಳಿ, ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ ಈ ಸಂಘವು ದಿನಾಂಕ : 19–5–1982 ರಲ್ಲಿ ಸಂಖ್ಯೆ : ಎಸ್‌ಓಸಿ. 14/1982–83 ರಂತೆ ನೋಂದಣಿ ಆಗಿದ್ದು, ಸಂಸ್ಥೆಗೆ ಸಂಬಂಧಿಸಿದಂತೆ ಲೆಕ್ಕಪತ್ರಗಳನ್ನು ದಿನಾಂಕ : 31–3–2007 ರವರೆಗೆ ಕಾಲಕಾಲಕ್ಕೆ ಸಲ್ಲಿಸಲಾಗಿರುತ್ತದೆ. ನಂತರ ದಿನಾಂಕ : 16–7–2007 ರಂದು ಸಂಸ್ಥೆಯ ಅಧ್ಯಕ್ಷರೆಂದು ಹೇಳಿಕೊಂಡಿರುವ ಶ್ರೀ ಬಿ. ಹನುಮಂತಯ್ಯ ರವರು ದೂರು ಅರ್ಜಿ ನೀಡಿ, 1982 ರಿಂದ ಇಂದಿನವರೆಗೆ ತಾವೇ ಅಧ್ಯಕ್ಷರಾಗಿದ್ದು, ಸಂಸ್ಥೆಯನ್ನು ಅಭಿವೃದ್ಧಿ ಪಡಿಸಿರುವುದಾಗಿ ತಿಳಿಸುತ್ತಾ, ಸಂಸ್ಥೆಯ ಕಾರ್ಯದರ್ಶಿಯಾಗಿದ್ದ ಶ್ರೀ ಭಾನುಪ್ರಕಾಶ್ ಎಂಬುವರು ಅನೇಕ ಬಾರಿ ಎಚ್ಚರಿಕೆ ನೀಡಿದ್ದಾಗ್ಯೂ ಸಹ ಅವ್ಯವಹಾರ ಮಾಡಿದ್ದು, ಈತ ಸಿಬ್ಬಂದಿಯ ಬಗ್ಗೆ ಅನುಚಿತ ವರ್ತನೆ, ಹಣಕಾಸಿನ ಅವ್ಯವಹಾರ ಮಾಡುತ್ತಿದ್ದು, ಅಧ್ಯಕ್ಷರ ಸಹಿಯನ್ನು ನಕಲು ಮಾಡಿ ಬದಲಾವಣೆ ಮಾಡಿ ಅವರ ಕುಟುಂಬದವರನ್ನೇ ಸದಸ್ಯರನ್ನಾಗಿ ಮಾಡಿರುವ ಕಾರಣ ಅವರು ನೀಡಿರುವ ಕುಟುಂಬ ಆಡಳಿತ ಪಟ್ಟಿಯನ್ನು ರದ್ದು ಮಾಡಬೇಕೆಂದು ಕೋರಿರುತ್ತಾರೆ. ಅದರಂತೆ ಸಂಸ್ಥೆಯ ಆಡಳಿತ ದಾಖಲೆಯನ್ನು ಪರಿಶೀಲಿಸಲು ನೋಟೀಸ್ ನೀಡಿದ್ದಾಗ್ಯೂ ಸಹ ಅವುಗಳನ್ನು ಹಾಜರು ಪಡಿಸಿರುವುದಿಲ್ಲ. ಇದರಿಂದ ಸಂಸ್ಥೆಯ ಕಾರ್ಯದರ್ಶಿ, ಶ್ರೀ ಭಾನುಪ್ರಕಾಶ್ ಮತ್ತು ಅಧ್ಯಕ್ಷರು, ಶ್ರೀ ಬಿ. ಹನುಮಂತಯ್ಯ, ನಿವೃತ್ತ ಜಿಲ್ಲಾಧಿಕಾರಿಗಳು ಇವರ ಎರಡು ಗುಂಪುಗಳಲ್ಲಿ ಆಡಳಿತ ನಡೆಸುತ್ತಿರುವುದು ಕಂಡು ಬಂದಿರುವ ಹಿನ್ನಲೆಯಲ್ಲಿ, ಸಂಸ್ಥೆಗೆ

ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27ಎ ಮೇರೆಗೆ ಆಡಳಿತಾಧಿಕಾರಿಗಳನ್ನು ನೇಮಿಸಿ 2003-04 ನೇ ಸಾಲಿನಲ್ಲಿದ್ದ ಸದಸ್ಯರ ಆಧಾರದ ಮೇಲೆ ಚುನಾವಣೆ ನಡೆಸಲು ಆದೇಶ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಜಿಲ್ಲಾ ನೋಂದಣಾಧಿಕಾರಿಗಳ ಪ್ರಸ್ತಾವನೆಯ ಆಧಾರದನ್ವಯ ಮೇಲೆ ಓದಲಾದ ಕ್ರಮ ಸಂಖ್ಯೆ : (2) ಸರ್ಕಾರದ ದಿನಾಂಕ : 30-4-2008 ರ ಕಾರಣ ಕೇಳುವ ನೋಟೀಸನ್ನು ಸಂಸ್ಥೆಯ ಅಧ್ಯಕ್ಷರು ಮತ್ತು ಕಾರ್ಯದರ್ಶಿಯವರಿಗೆ ದಿನಾಂಕ : 2-5-2008 ರಂದು ಜಾರಿ ಮಾಡಲಾಗಿರುತ್ತದೆ. ಸಂಸ್ಥೆಯ ಅಧ್ಯಕ್ಷರಾದ ಶ್ರೀ ಬಿ. ಹನುಮಂತಯ್ಯ ರವರು ದಿನಾಂಕ : 19-5-2008 ರಂದು ಲಿಖಿತ ಹೇಳಿಕೆ ಸಲ್ಲಿಸಿ, ಸಂಸ್ಥೆಯ ಕಾರ್ಯದರ್ಶಿಯಾದ ಶ್ರೀ ಭಾನುಪ್ರಕಾಶ್ ರವರು ಅವ್ಯವಹಾರದಲ್ಲಿ ತೊಡಗಿರುವುದರಿಂದ, ಸಂಸ್ಥೆಯು ವಿವಾದದಿಂದ ಕೂಡಿದ್ದು, ತುಮಕೂರು ಜಿಲ್ಲಾ ನೋಂದಣಾಧಿಕಾರಿಗಳ ಶಿಫಾರಸ್ಸಿನಂತೆ, ಸಂಸ್ಥೆಗೆ ಉಪ ವಿಭಾಗಾಧಿಕಾರಿಗಳು, ಮಧುಗಿರಿ ಉಪವಿಭಾಗ, ಮಧುಗಿರಿ ಇವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡುವಂತೆ ಕೋರಿರುತ್ತಾರೆ. ಸಂಸ್ಥೆಯ ಕಾರ್ಯದರ್ಶಿಯಾದ ಶ್ರೀ ಭಾನುಪ್ರಕಾಶ್ ರವರು ದಿನಾಂಕ : 30-5-2008 ರಂದು ತಮ್ಮ ಲಿಖಿತ ಹೇಳಿಕೆಯನ್ನು ಸಲ್ಲಿಸಿ, ಸಂಸ್ಥೆಯು ಪ್ರತಿ ವರ್ಷ ಲೆಕ್ಕಪತ್ರಗಳನ್ನು ಹಾಗೂ ಚುನಾಯಿತ ಕಾರ್ಯಕಾರಿ ಮಂಡಳಿ ಪಟ್ಟಿಯನ್ನು ಜಿಲ್ಲಾ ನೋಂದಣಾಧಿಕಾರಿಗಳಿಗೆ ಸಲ್ಲಿಸಿದ್ದು, ಕಾರ್ಯಕಾರಿ ಮಂಡಳಿಯಲ್ಲಿ ಯಾವುದೇ ಭಿನ್ನಾಭಿಪ್ರಾಯ ಹಾಗೂ ವಿವಾದ ಇರುವುದಿಲ್ಲವೆಂದು ತಿಳಿಸುತ್ತಾ, 2003-04 ನೇ ಸಾಲಿನ ಸದಸ್ಯತ್ವ ಶುಲ್ಕವನ್ನು ಪಾವತಿ ಮಾಡದ ಕಾರಣ ಶ್ರೀ ಬಿ. ಹನುಮಂತಯ್ಯ ರವರನ್ನು 2004-05 ನೇ ಸಾಲಿನಿಂದ ಅವರ ಸದಸ್ಯತ್ವವನ್ನು ಹೊರತುಪಡಿಸಿ, ಅವರನ್ನು ಅಧ್ಯಕ್ಷ ಸ್ಥಾನದಿಂದ ಹಾಗೂ ಸಂಸ್ಥೆಯ ಸದಸ್ಯತ್ವದಿಂದ ಅನರ್ಹಗೊಳಿಸಲಾಗಿದ್ದು, ಜಿಲ್ಲಾ ನೋಂದಣಾಧಿಕಾರಿಗಳು ಶ್ರೀ ಬಿ. ಹನುಮಂತಯ್ಯ ರವರ ಜೊತೆ ಶಾಮೀಲಾಗಿ, ದಾಖಲೆಗಳನ್ನು ಒದಗಿಸಿದ್ದರೂ ಸಹ ಅದನ್ನು ಪರಿಶೀಲಿಸದೇ ಸರ್ಕಾರಕ್ಕೆ ಸುಳ್ಳು ವರದಿ ನೀಡಿರುತ್ತಾರೆ ಎಂದು ತಿಳಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (3) ದಿನಾಂಕ : 11-7-2008 ರ ಪತ್ರದಲ್ಲಿ ಸರ್ಕಾರವು ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ರವರಿಗೆ ಪತ್ರ ಬರೆದು, ಜಿಲ್ಲಾ ನೋಂದಣಾಧಿಕಾರಿಗಳ ದಿನಾಂಕ : 23-2-2008 ರ ಪತ್ರದಲ್ಲಿ ತಿಳಿಸಿರುವಂತೆ ಶ್ರೀ ನರಸಿಂಹಸ್ವಾಮಿ ವಿದ್ಯಾ ಸಂಸ್ಥೆ (ರಿ), ಮಾದೇನಹಳ್ಳಿ, ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ ಈ ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನೇಮಿಸುವ ಬಗ್ಗೆ ತಮ್ಮ ಅಭಿಪ್ರಾಯದ ವರದಿಯನ್ನು ನೀಡುವಂತೆ ಕೋರಲಾಗಿತ್ತು. ನಂತರ ದಿನಾಂಕ : 24-1-2009 ರಂದು ಒಂದು ನೆನಪೋಲೆ ಪತ್ರವನ್ನು ಸಹ ಕಳುಹಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ : (4) ದಿನಾಂಕ : 10-6-2009 ರ ಪತ್ರದಲ್ಲಿ, ದೂರು ಅರ್ಜಿಯ ಬಗ್ಗೆ ಪರಿಶೀಲಿಸಿ, ಸಹಕಾರ ಸಂಘಗಳ ನಿಬಂಧಕರು, ತಮಕೂರು ಜಿಲ್ಲೆ ರವರು ಸಲ್ಲಿಸಿರುವ ವರದಿಯನ್ನಾಧರಿಸಿ, ಶ್ರೀ ಬಿ. ಹನುಮಂತಯ್ಯ ರವರು 1982-83 ರಿಂದ 2003-04 ನೇ ಸಾಲಿನವರೆಗೆ ಸಂಘದ ಕಾರ್ಯಕಾರಿ ಮಂಡಳಿಯ ಸದಸ್ಯರಾಗಿ ಆಯ್ಕೆ ಆಗಿದ್ದು ಸಂಸ್ಥೆಯ ಕಾರ್ಯಕಾರಿ ಸಮಿತಿ ಅಧ್ಯಕ್ಷರು ಎಂದು ದೃಢಪಟ್ಟಿದ್ದು, 2004-05 ರಿಂದ 2008-09 ನೇ ಸಾಲಿನವರೆಗೆ ಶ್ರೀ ಗುರುಸಿದ್ದಪ್ಪ ಎಂಬುವರು ಸಂಸ್ಥೆಯ ಕಾರ್ಯಕಾರಿ ಸಮಿತಿ ಅಧ್ಯಕ್ಷರು ಆಗಿದ್ದು, ಕಾಲಕಾಲಕ್ಕೆ ಸಂಘದ ಸರ್ವ ಸದಸ್ಯರ ಸಭೆ ನಡೆದಿರುವುದರಿಂದ, ಸಂಘದ ಆಡಳಿತ ಮಂಡಳಿಯನ್ನು ರದ್ದುಪಡಿಸಿ ಆಡಳಿತಾಧಿಕಾರಿಯನ್ನು ನೇಮಕ ಮಾಡುವುದು ಸಮಂಜಸವಲ್ಲವೆಂದು, ಸಂಸ್ಥೆಯ ವಾರ್ಷಿಕ ಮಹಾಸಭೆಯು ದಿನಾಂಕ : 11-9-2008 ರಂದು ನಡೆದು ಹೊಸ ಕಾರ್ಯಕಾರಿ ಸಮಿತಿ ಆಯ್ಕೆ ಮಾಡಿ ಕೆಲಸ ನಿರ್ವಹಿಸುತ್ತಿರುವುದರಿಂದ, ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27ಎ (1) ರಡಿಯಲ್ಲಿ ಆಡಳಿತಾಧಿಕಾರಿಗಳನ್ನು ನೇಮಕ ಮಾಡುವುದು ಸಮಂಜಸವಲ್ಲವೆಂದು ಸಹಕಾರ ಸಂಘಗಳ ಅಪರ ನಿಬಂಧಕರು ಸರ್ಕಾರಕ್ಕೆ ಪತ್ರ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (5) ರ ಮನವಿಯಲ್ಲಿ ಶ್ರೀ ಬಿ. ಹನಮಂತಯ್ಯ, ಸಂಸ್ಥೆಯ ಹಿಂದಿನ ಅಧ್ಯಕ್ಷರು ಸರ್ಕಾರಕ್ಕೆ ಸಲ್ಲಿಸಿರುವ ದಿನಾಂಕ : 9-7-2009 ರ ಮನವಿಯನ್ನು ಮೇಲೆ ಓದಲಾದ ಕ್ರಮ ಸಂಖ್ಯೆ : (6) ರ ಸರ್ಕಾರದ ದಿನಾಂಕ : 4-8-2009 ರ ಪತ್ರದಲ್ಲಿ, ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ರವರಿಗೆ ಕಳುಹಿಸಿ, ದಿನಾಂಕ : 10-6-2009 ರ ಪತ್ರದಲ್ಲಿ, ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನೇಮಿಸುವುದು ಸಮಂಜಸವಲ್ಲವೆಂದು ಅಭಿಪ್ರಾಯ ಪಡೆಯಲಾಗಿದೆ ಎಂದು ತಿಳಿಸಿದ್ದು ಆದರೆ ತಮ್ಮ ಸ್ಪಷ್ಟ ಅಭಿಪ್ರಾಯ ನೀಡಿರುವುದಿಲ್ಲವೆಂದು ಹಾಗೂ ಶ್ರೀ ಬಿ. ಹನುಮಂತಯ್ಯ ಸಂಸ್ಥೆಯ ಹಿಂದಿನ ಅಧ್ಯಕ್ಷರು ಸಲ್ಲಿಸರುವ ದಿನಾಂಕ : 9-7-2009 ರ ಮನವಿ ಹಾಗೂ ಅದರ ಅಡಕಗಳನ್ನು ಲಗತ್ತಿಸುತ್ತಾ, ಪರಿಶೀಲಿಸಿ ಸ್ಪಷ್ಟ ಅಭಿಪ್ರಾಯವನ್ನು ನೀಡುವಂತೆ ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ : (7) ರ ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಮತ್ತು ಸಹಕಾರ ಸಂಘಗಳ ಅಪರ ನಿಬಂಧಕರು, ಬೆಂಗಳೂರು ರವರ ಪತ್ರಗಳಲ್ಲಿ, ಸಂಸ್ಥೆಯ ಬಗ್ಗೆ ಮರುವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಸಲ್ಲಿಸಿದ್ದು, ಸದರಿ ವರದಿಯಲ್ಲಿ, ದೂರು ಸಲ್ಲಿಸಿರುವ ಶ್ರೀ ಬಿ. ಹನುಮಂತಯ್ಯ ರವರು ಸಂಘದ 1982 ರಿಂದ 2003 ರವರೆಗೆ ನಡೆದ ಸದಸ್ಯ ವಾರ್ಷಿಕ ಮಹಾಸಭೆಯಲ್ಲಿ ಅಧ್ಯಕ್ಷತೆ ವಹಿಸಿರುವುದು ಕಂಡು ಬಂದಿದ್ದು, ನಂತರ 2005 ರಿಂದ 2009 ನೇ ಸಾಲಿನವರೆಗೆ ನಡೆದ ಸಂಘದ ವಾರ್ಷಿಕ ಸರ್ವ ಸದಸ್ಯರ ಸಭೆಯ ಅಧ್ಯಕ್ಷತೆಯನ್ನು ಶ್ರೀ ಗುರುಸಿದ್ದಪ್ಪರವರೇ ವಹಿಸಿರುವುದು ಕಾಖಲಾತಿಯಿಂದ ಕಂಡು ಬಂದಿದ್ದರಿಂದ, ಅರ್ಜಿದಾರರು ದೂರು ಅರ್ಜಿಯಲ್ಲಿ ನಮೂದಿಸಿರುವ ಅಂಶಗಳನ್ನು ಸಾಬೀತು ಮಾಡಲು ವಿಫಲರಾಗಿರುವುದರಿಂದ, ಸದರಿಯವರ ದೂರು ಅರ್ಜಿಯನ್ನು ವಜಾಗೊಳಿಸುವುದು ಸೂಕ್ತವೆಂದು ಹಾಗೂ ಹಾಲಿ ಇರುವ ಕಾರ್ಯಕಾರಿ ಸಮಿತಿಯು ನೈಜ ಸಮಿತಿಯೆಂದು ಅಭಿಪ್ರಾಯ ಪಟ್ಟು ವರದಿ ಸಲ್ಲಿಸಿರುತ್ತಾರೆ. ಅದರಂತೆ ಶ್ರೀ ಬಿ. ಹನುಮಂತಯ್ಯರವರಿಗೆ ದಿನಾಂಕ : 8-7-2010 ರಂದು ಹಿಂಬರಹ ನೀಡಲಾಗಿರುತ್ತದೆ.

ಶ್ರೀ ಬಿ. ಹನುಮಂತಯ್ಯ, ನಿವೃತ್ತ ಜಿಲ್ಲಾಧಿಕಾರಿಗಳು, ಸಂಸ್ಥೆಯ ಸಂಸ್ಥಾಪಕ ಅಧ್ಯಕ್ಷರುರವರು ಪುನಃ ದಿನಾಂಕ : 24-6-2010, 17-7-2010, 20-7-2010ಗಳಂದು ಮನವಿ ಸಲ್ಲಿಸಿದ್ದು, ಸದರಿ ಮನವಿಯನ್ನು ಸಹಕಾರ ಸಂಘಗಳ ಅಪರ ನಿಬಂಧಕರು, ಬೆಂಗಳೂರುರವರಿಗೆ ಕಳುಹಿಸಿ ನಿಬಂಧಕರ ಅಧ್ಯಕ್ಷತೆಯಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರು, ಸಂಸ್ಥೆಯ ಅಧ್ಯಕ್ಷರು, ಅರ್ಜಿದಾರರನ್ನು ಹಾಗೂ ಇನ್ನಿತರೆ ಸಂಬಂಧಪಟ್ಟವರನ್ನು ಆಹ್ವಾನಿಸಿ, ಒಂದು ಸಭೆಯನ್ನು ನಡೆಸಿ, ಸೂಕ್ತ ನಿರ್ಣಯವನ್ನು ತೆಗೆದುಕೊಂಡು ತಮ್ಮ ಸ್ಪಷ್ಟ ಅಭಿಪ್ರಾಯದೊಂದಿಗೆ ಸರ್ಕಾರಕ್ಕೆ ವರದಿ ನೀಡುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ : (8) ರ ಸರ್ಕಾರದ ದಿನಾಂಕ : 13-8-2010 ರ ಪತ್ರದಲ್ಲಿ ಕೋರಲಾಗಿತ್ತು. ಅದರಂತೆ ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇಲ್ಲಿ ದಿನಾಂಕ : 13-10-2010 ರಂದು ಬೆಳಿಗ್ಗೆ 11-00 ಗಂಟೆಗೆ ಸಂಬಂಧಪಟ್ಟವರ ಸಭೆ ನಿಗದಿಪಡಿಸಿ ನಡೆಸಲಾಯಿತು. ಸದರಿ ಸಭೆಗೆ ಸಂಸ್ಥೆಯ ಕಾರ್ಯದರ್ಶಿಯವರಾಗಲೀ ಅಥವಾ ಅಧ್ಯಕ್ಷರೆಂದು ಹೇಳುವ ಶ್ರೀ ಗುರುಸಿದ್ದಪ್ಪರವರಾಗಲೀ ಹಾಜರಾಗಿರುವುದಿಲ್ಲ. ಈ ಕ್ರಮವನ್ನು ಪ್ರಶ್ನಿಸಿ ಸದರಿಯವರು ಉಚ್ಚ ನ್ಯಾಯಾಲಯದ ಮುಂದೆ ದಾಖಲಿಸಿದ್ದ ರಿಟ್ ಅರ್ಜಿ ಸಂಖ್ಯೆ : 19495/2010 ರಲ್ಲಿನ ದಿನಾಂಕ : 5-7-2010 ರ ಆದೇಶದಂತೆ, ಸಂಘದ ದಾಖಲೆಗಳನ್ನು ಹಾಜರುಪಡಿಸಲು ಸೂಚಿಸುವುದು ಈ ಪ್ರಾಧಿಕಾರದ ಅಂದರೆ ನಿಬಂಧಕರ ವ್ಯಾಪ್ತಿಗೆ ಬರುವುದಿಲ್ಲವಾದ್ದರಿಂದ, ವಿಚಾರಣೆಯನ್ನು ಮುಕ್ತಾಯಗೊಳಿಸಲು ದಿನಾಂಕ : 23-9-2010 ರ ಪತ್ರದಲ್ಲಿ ವಿನಂತಿಸಿರುತ್ತಾರೆ.

ಸಭೆಗೆ ಹಾಜರಿದ್ದ ಅರ್ಜಿದಾರರಾದ ಶ್ರೀ ಬಿ. ಹನುಮಂತಯ್ಯರವರು ಲಿಖಿತ ಮನವಿಯನ್ನು ಸಲ್ಲಿಸಿ, ಮೇಲ್ಕಂಡ ಸಂಸ್ಥೆಯ ಕಾರ್ಯನಿರ್ವಹಣೆ ಬಗ್ಗೆ ದಿನಾಂಕ : 23–2–2008 ರ ಪತ್ರದಲ್ಲಿ ತುಮಕೂರು ಜಿಲ್ಲಾ ನೋಂದಣಾಧಿಕಾರಿಗಳು ಕಂದಾಯ ಇಲಾಖೆಗೆ ಸಲ್ಲಿಸಿರುವ ವರದಿಯನ್ನು ಹಾಗೂ ಶ್ರೀ ಬಿ. ಹನುಮಂತಯ್ಯರವರ ದಿನಾಂಕ : 15–12–2008ರಂದು ಸಹಕಾರ ಸಂಘಗಳ ನಿಬಂಧಕರ ಕಛೇರಿಗೆ ಸಲ್ಲಿಸಿರುವ ಮನವಿಯಲ್ಲಿನ ಅಂಶಗಳು ಹಾಗೂ ಅದರ ಜೊತೆ ಲಗತ್ತಿಸಿರುವ ದಾಖಲಾತಿಗಳನ್ನು ಪರಿಗಣಿಸಿ, ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನೇಮಿಸಲು ವಿನಂತಿಸಿರುತ್ತಾರೆ. ಸಂಸ್ಥೆಯು ಹೊಂದಿರುವ ಶಾಲಾ ಕಾಲೇಜುಗಳ ಸಿಬ್ಬಂದಿಗಳಿಗೆ ಈಗಲೂ ವಾರ್ಷಿಕ ವೇತನ, ಕಾಲಮಿತಿ ಬಡ್ತಿ ಇತ್ಯಾದಿ ಸೇವಾ ಸೌಲಭ್ಯಗಳನ್ನು ತಾವೇ ಮಂಜೂರು ಮಾಡುತ್ತಿರುವುದಾಗಿ ಮತ್ತು ವಿದ್ಯಾ ಸಂಸ್ಥೆಗಳಿಗೆ ಸರ್ಕಾರದಿಂದ ಆರ್ಥಿಕ ನೆರವಿನ ನವೀಕರಣಕ್ಕಾಗಿ ಸಲ್ಲಿಸುವ ಪ್ರಸ್ತಾವನೆಗಳಿಗೆ ಸಂಸ್ಥೆಯ ಅಧ್ಯಕ್ಷರಾಗಿ ತಾವೇ ಖುದ್ದು ಸಹಿ ಮಾಡಿರುವುದಾಗಿ ತಿಳಿಸಿರುತ್ತಾರೆ.

ಅರ್ಜಿದಾರರಾದ ಶ್ರೀ ಬಿ. ಹನುಮಂತಯ್ಯ ಇವರ ಹೇಳಿಕೆಗಳನ್ನು ಸಂಘದ ಕಾರ್ಯದರ್ಶಿಯವರು ಯಾವುದೇ ಸಂದರ್ಭದಲ್ಲಿಯೂ ಆಕ್ಷೇಪಿಸಿರುವುದಿಲ್ಲ ಹಾಗೂ ಅರ್ಜಿದಾರರ ಆರೋಪಗಳ ಬಗ್ಗೆ ತುಮಕೂರು ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು ನಡೆಸಿರುವ ವಿಚಾರಣಾ ವೇಳೆಯಲ್ಲಿ ಸಂಘದ ಕಾರ್ಯದರ್ಶಿಯವರು ಖುದ್ದಾಗಿ ವಿಚಾರಣೆಗೆ ಹಾಜರಾಗಿ ಸಂಘದ ಮೂಲ ದಾಖಲಾತಿಗಳನ್ನು ಪರಿಶೀಲನೆಗೆ ಹಾಜರು ಪಡಿಸಿರುವುದಿಲ್ಲ. ಬದಲಾಗಿ ಅರ್ಜಿದಾರರ ಮನವಿಯ ಬಗ್ಗೆ ಕೈಕೊಳ್ಳುವ ವಿಚಾರಣಾ ಪ್ರಾಧಿಕಾರದ ಅಧಿಕಾರವನ್ನು ರಿಟ್ ಅರ್ಜಿ ಮೂಲಕ ಪ್ರಶ್ನಿಸಿರುವುದು ದಿನಾಂಕ : 23–2–2008 ರ ಪತ್ರದ ಮೂಲಕ ತುಮಕೂರು ಜಿಲ್ಲಾ ನೋಂದಣಾಧಿಕಾರಿಗಳು ಸಲ್ಲಿಸಿರುವ ವರದಿಯನ್ನು ಪುಷ್ಟೀಕರಿಸುತ್ತದೆ.

ಈ ಪ್ರಕರಣದಲ್ಲಿ, ತುಮಕೂರು ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು ನಡೆಸಿರುವ ವಿಚಾರಣೆಯಲ್ಲಿ ಅರ್ಜಿದಾರರು ಈಗಲೂ ವಿದ್ಯಾ ಸಂಸ್ಥೆಯ ಸಿಬ್ಬಂದಿಗಳ ಸೇವಾ ಸವಲತ್ತುಗಳನ್ನು ಮಂಜೂರು ಮಾಡುತ್ತಿರುವುದರ ಬಗ್ಗೆ ಹಾಗೂ ಸಂಸ್ಥೆಗಳಿಗೆ ಮಂಜೂರಾಗಿರುವ ಆರ್ಥಿಕ ಸವಲತ್ತುಗಳ ನವೀಕರಣದ ಪ್ರಸ್ತಾವನೆಗಳಿಗೆ ಅಧ್ಯಕ್ಷರಾಗಿ ಸಹಿ ಮಾಡುತ್ತಿರುವ ಕುರಿತು ಹಾಲಿ ಕಾರ್ಯದರ್ಶಿಯವರು ಯಾವುದೇ ಸಂದರ್ಭದಲ್ಲಿ ಆಕ್ಷೇಪಿಸದಿರುವುದನ್ನು ಗಣನೆಗೆ ತೆಗೆದುಕೊಂಡಿರುವುದು ಕಂಡುಬರುವುದಿಲ್ಲ.

ಮೇಲ್ಕಂಡ ಅಂಶಗಳಿಂದಾಗಿ ಈ ಪ್ರಕರಣದಲ್ಲಿ ದಿನಾಂಕ : 23–2–2008 ರ ಪತ್ರದಲ್ಲಿ ತುಮಕೂರು ಜಿಲಾ ನೋಂದಣಾಧಿಕಾರಿಗಳ ಅಭಿಪ್ರಾಯದನ್ವಯ ಶ್ರೀ ನರಸಿಂಹಸ್ವಾಮಿ ವಿದ್ಯಾ ಸಂಸ್ಥೆ (ರಿ), ಮಾದೇನಹಳ್ಳಿ, ಮಧುಗಿರಿ ತಾಲ್ಲೂಕು ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27ಎರನ್ವಯ ಆಡಳಿತಾಧಿಕಾರಿಯನ್ನು ನೇಮಿಸಲು ಹಾಗೂ 2003–04 ನೇ ಸಾಲಿನಲ್ಲಿದ್ದ ಸದಸ್ಯರ ಆಧಾರದ ಮೇಲೆ ಚುನಾವಣೆ ನಡೆಸಲು ಆದೇಶಿಸುವಂತೆ ಸಹಕಾರ ಸಂಘಗಳ ನಿಬಂಧಕರು ಶಿಫಾರಸ್ಸು ಮಾಡಿ ಸರ್ಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 118 ಸ ಸಂ ನೋ 2008, ಬೆಂಗಳೂರು, ದಿನಾಂಕ: 9–12–2010**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ನರಸಿಂಹಸ್ವಾಮಿ ವಿದ್ಯಾ ಸಂಸ್ಥೆ (ರಿ), ಮಾದೇನಹಳ್ಳಿ, ಮಧುಗಿರಿ ತಾಲ್ಲೂಕು, ತಮಕೂರು ಲಜಿಲ್ಲೆ ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27 (ಎ) ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸಹಾಯಕ ನಿಬಂಧಕರು, ಮಧುಗಿರಿರವರನ್ನು ಆಡಳಿತಾಧಿಕಾರಿಯಾಗಿ ಆರು (6) ತಿಂಗಳ ಅವಧಿಗೆ ನೇಮಿಸಿ ಆದೇಶಿಸಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಆಡಳಿತ ಮಂಡಳಿಯ ಅವ್ಯವಹಾರಗಳನ್ನು ಸರಿಪಡಿಸಿ, **ಸಂಸ್ಥೆಗೆ 2003–04ನೇ ಸಾಲಿನಲ್ಲಿದ್ದ ಸದಸ್ಯರ ಆಧಾರದ ಮೇಲೆ ಚುನಾವಣೆ ನಡೆಸಿ,** ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ. ಆಡಳಿತಾಧಿಕಾರಿಗಳು ತೆಗೆದುಕೊಂಡ ಕ್ರಮಗಳ ಬಗ್ಗೆ ಸರ್ಕಾರಕ್ಕೆ ಮಾಹಿತಿಯನ್ನು ಸಹ ಒದಗಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ನಂಜುಂಡಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ

ಪಿ.ಆರ್.2980

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

## ಸುತ್ತೋಲೆ

**ಸಂಖ್ಯೆ : ಸಿಆಸುಇ 055 ಕೆಇವಿ 10, ದಿನಾಂಕ : 20–11–2010**

**ವಿಷಯ :** ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಕಳುಹಿಸಲಾಗುವ ಶಿಸ್ತು ಪ್ರಸ್ತಾವನೆಗಳ ಕುರಿತಂತೆ.

**ಉಲ್ಲೇಖ :** ಸುತ್ತೋಲೆ ಸಂಖ್ಯೆ : ಸಿಆಸುಇ 1 ಸೇಇವಿ 05, ದಿನಾಂಕ : 09–02–05

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ವಿವಿಧ ವೃಂದದ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ/ಇಲಾಖಾ ವಿಚಾರಣೆ ಪ್ರಾರಂಭಿಸಲು ಸಂಬಂಧಪಟ್ಟ ಆಡಳಿತ ಇಲಾಖೆಗಳು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಸಲ್ಲಿಸಲ್ಪಡುವ ಪ್ರಸ್ತಾವನೆಗಳು ಯಾವ ರೀತಿ ಇರಬೇಕು. ಏನೇನನ್ನು ಒಳಗೊಂಡಿರಬೇಕು ಎಂಬ ಬಗ್ಗೆ ಉಲ್ಲೇಖಿತ ಸುತ್ತೋಲೆಯಲ್ಲಿ ಸಮಗ್ರವಾದ ಮಾರ್ಗಸೂಚಿ ಸ್ಪಷ್ಟನೆಗಳನ್ನು ನೀಡಲಾಗಿದ್ದರೂ ಸಹ, ಹಲವಾರು ಆಡಳಿತ ಇಲಾಖೆಗಳು ಇದನ್ನು ಅನುಸರಿಸದೇ, ಅಪೂರ್ಣವಾದ ಮತ್ತು ವಿನಾಕಾರಣ ಪತ್ರ ವ್ಯವಹಾರಗಳಿಗೆ ಎಡೆಮಾಡಿಕೊಡುವ ಪ್ರಸ್ತಾವನೆಗಳನ್ನು ಈಗಲೂ ಸಲ್ಲಿಸುತ್ತಿರುವುದು ಕಂಡುಬಂದಿರುತ್ತದೆ. ಇದರಿಂದ ಅನವಶ್ಯಕ ಕಾಲ ವಿಳಂಬವಾಗಿ ಸಕಾಲದಲ್ಲಿ ಶಿಸ್ತು ಕ್ರಮವನ್ನು ಪ್ರಾರಂಭಿಸಲು ಸಾಧ್ಯವಾಗುತ್ತಿಲ್ಲ. ಇದರಿಂದಾಗಿ ಆರೋಪಿತರ ವಿರುದ್ಧ ದೋಷಾರೋಪಣೆಗಳು ದುರ್ಬಲಗೊಳ್ಳುವ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ. ಆದಕಾರಣ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಶಿಸ್ತು ಪ್ರಸ್ತಾವನೆಯನ್ನು ಸಲ್ಲಿಸುವ ಮೊದಲು, ಪ್ರಸಾವನೆಯು ಏನೇನನ್ನು ಒಳಗೊಂಡಿರಬೇಕು ಎಂಬುದನ್ನು ಆಡಳಿತ ಇಲಾಖಾ ಮುಖ್ಯಸ್ಥರು ಖಚಿತಪಡಿಸಿಕೊಳ್ಳುವ ಸಲುವಾಗಿ, ಉಲ್ಲೇಖಿತ ಸುತ್ತೋಲೆಯಲ್ಲಿನ ಮಾರ್ಗಸೂಚಿಯ ಹಿನ್ನೆಲೆಯಲ್ಲಿ Check List ಒಂದನ್ನು ಸಿದ್ಧಪಡಿಸಿ ಈ ಸುತ್ತೋಲೆಯ ಹಿಂಬದಿಯಲ್ಲಿರಿಸಲಾಗಿದೆ.

ಇನ್ನು ಮುಂದೆ ಉಲ್ಲೇಖಿತ ಸುತ್ತೋಲೆಯಲ್ಲಿನ ಮಾರ್ಗಸೂಚಿಯಂತೆ ಹಾಗೂ Check List ನಲ್ಲಿ ತಿಳಿಸಿರುವ ರೀತಿಯಲ್ಲಿ ಇಲಾಖಾ ಕಾರ್ಯದರ್ಶಿಯವರು ಸದರಿ Check List ಅನ್ನು ದೃಢೀಕರಿಸಿದ ಶಿಸ್ತು ಪ್ರಸ್ತಾವನೆಗಳನ್ನು ಮಾತ್ರ ಸಿಬ್ಬಂದಿ ಮತ್ತು ಆಡಳಿತ ಇಲಾಖೆಯು ಪರಿಗಣಿಸುವುದಾಗಿ ತಿಳಿಸಲಾಗಿದೆ.

**ಎಸ್.ವಿ. ರಂಗನಾಥ್**

ಸರ್ಕಾರದ ಮುಖ್ಯ ಕಾರ್ಯದರ್ಶಿ

## Check List on DE proposal

Part-I

| | ವಿಷಯ | | |
|---|---|---|---|
| 1 | ಶಿಸ್ತು ಪ್ರಸ್ತಾವನೆಯನ್ನು ಕಡತ ರೂಪದಲ್ಲಿ ಸಲ್ಲಿಸಲಾಗಿದೆಯೇ | ಹೌದು | ಇಲ್ಲ |
| 2 | ಶಿಸ್ತು ಪ್ರಸ್ತಾವನೆಗೆ ಆಡಳಿತ ಇಲಾಖೆಯು ತನ್ನ ಖಚಿತ, ನಿರ್ದಿಷ್ಟ, ಸ್ಪಷ್ಟ ಅಭಿಪ್ರಾಯ ದಾಖಲಿಸಿದೆಯೇ | ಹೌದು | ಇಲ್ಲ |
| 3* | ಶಿಸ್ತು ಪ್ರಸ್ತಾವನೆಗೆ ಇಲಾಖಾ ಸಚಿವರ ಅನುಮೋದನೆ ಪಡೆದಿರುವ ಬಗ್ಗೆ ಮಾಹಿತಿ ಇದೆಯೇ | ಹೌದು | ಇಲ್ಲ |
| 4* | ಕರಡು ದೋಷಾರೋಪಣ ಪಟ್ಟಿ ಸಲ್ಲಿಸಲಾಗಿದೆಯೇ | ಹೌದು | ಇಲ್ಲ |
| 5* | ಕ್ಷೇತ್ರ ಇಲಾಖೆಯಿಂದ ಬಂದಂತಹ ದೋಷಾರೋಪಣ ಪಟ್ಟಿಯನ್ನು ಆಡಳಿತ ಇಲಾಖೆಯು ವಿವೇಚಾನುಸಾರ ಪರಿಶೀಲಿಸಿದೆಯೇ | ಹೌದು | ಇಲ್ಲ |

Part-II

| | | | |
|---|---|---|---|
| 8* | ಕರಡು ದೋಷಾರೋಪಣ ಪಟ್ಟಿಗೆ ಸಂಬಂಧಿಸಿದಂತೆ | | |
| | 1. ಆರೋಪಗಳು ನಿರ್ದಿಷ್ಟವಾಗಿದೆಯೆ | ಹೌದು | ಇಲ್ಲ |
| | 2. ಉಲ್ಲಂಘನೆಯಾಗಿರುವ ಕಾನೂನು/ನಿಯಮಗಳನ್ನು ಉಲ್ಲೇಖಿಸಲಾಗಿದೆಯೇ | ಹೌದು | ಇಲ್ಲ |
| | 3. ಆರ್ಥಿಕ ನಷ್ಟ ಉಂಟಾಗಿದ್ದಲ್ಲಿ, ನಿರ್ದಿಷ್ಟ ಮೊತ್ತವನ್ನು ನಮೂದಿಸಲಾಗಿದೆಯೇ | ಹೌದು | ಇಲ್ಲ |
| | 4. ಅನುಬಂಧ–2 ರಲ್ಲಿ ದುರ್ನಡತೆಯ ಎಲ್ಲ ವಿವರಗಳನ್ನು ದಾಖಲಿಸಲಾಗಿದೆಯೇ | ಹೌದು | ಇಲ್ಲ |
| | 5. ಅನುಬಂಧ–3 ರಲ್ಲಿ ದಾಖಲೆಗಳ ಪಟ್ಟಿಯನ್ನು ನೀಡಲಾಗಿದೆಯೇ | ಹೌದು | ಇಲ್ಲ |
| | 6. ಪ್ರಸ್ತಾವನೆಯ ಜೊತೆಗೆ ಅನುಬಂಧ–3 ರಲ್ಲಿನ | | |
| | (a) ಮೂಲ ದಾಖಲೆಗಳನ್ನು ಒದಗಿಸಲಾಗಿದೆಯೇ | ಹೌದು | ಇಲ್ಲ |
| | (b) ದೃಢೀಕರಿಸಿದ ನಕಲು ಪ್ರತಿಗಳನ್ನು ಒದಗಿಸಲಾಗಿದೆಯೇ | ಹೌದು | ಇಲ್ಲ |
| | (c) ದಾಖಲೆಗಳನ್ನು Index ಮಾಡಿ, ಪುಟ ಸಂಖ್ಯೆಯನ್ನು ನೀಡಲಾಗಿದೆಯೇ | ಹೌದು | ಇಲ್ಲ |
| | 7. ಅನುಬಂಧ–4 ರಲ್ಲಿ | | |
| | (a) ಘಟನೆ ನಡೆದಾಗ ಇದ್ದ ಸಾಕ್ಷಿಗಳ ಪಟ್ಟಿಯನ್ನು ಹೆಸರು, ಹುದ್ದೆ, ವಿಳಾಸ ಇತ್ಯಾದಿ ನಮೂದಿಸಲಾಗಿದೆಯೇ | ಹೌದು | ಇಲ್ಲ |
| | (b) ಈಗ ಇವರುಗಳು ಸದರಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿಲ್ಲದಿದ್ದಲ್ಲಿ, ಪ್ರಸ್ತುತ ಇವರು ಕಾರ್ಯನಿರ್ವಹಿಸುತ್ತಿರುವ ಹುದ್ದೆ, ಕಛೇರಿ ವಿಳಾಸ ನಮೂದಿಸಲಾಗಿದೆಯೇ, | ಹೌದು | ಇಲ್ಲ |
| | (c) ನಿವೃತ್ತರಾಗಿದ್ದಲ್ಲಿ ಖಾಯಂ ನಿವಾಸದ ವಿಳಾಸ ದೂರವಾಣಿ ಸಂಖ್ಯೆ ಇತ್ಯಾದಿಗಳನ್ನು ನಮೂದಿಸಲಾಗಿದೆಯೇ | ಹೌದು | ಇಲ್ಲ |

Part-III

| | | | |
|---|---|---|---|
| 9 | ಆರೋಪಿತ ಅಧಿಕಾರಿ/ಸಿಬ್ಬಂದಿಯ ಸೇವಾ ವಿವರಗಳ ಬಗ್ಗೆ | | |
| | 1. ಘಟನೆ ನಡೆದಾಗ ಯಾವ ಹುದ್ದೆಯಲ್ಲಿ ಯಾವ ಕಛೇರಿಯಲ್ಲಿ ಸೇವೆ ಸಲ್ಲಿಸುತ್ತಿದ್ದರು ಎಂಬ ವಿವರ ನೀಡಲಾಗಿದೆಯೇ | ಹೌದು | ಇಲ್ಲ |
| | 2. ಈಗಿನ ಹುದ್ದೆ, ಕಛೇರಿ ವಿಳಾಸ (Postal address) ನೀಡಲಾಗಿದೆಯೇ | ಹೌದು | ಇಲ್ಲ |
| | 3. ಕೆಳಕಂಡ ವೇತನ ವಿವರಗಳನ್ನು ನೀಡಲಾಗಿದೆಯೇ (except KAS Officer)* | | |
| | a) ಈಗಿನ ವೇತನ ಶ್ರೇಣಿ | ಹೌದು | ಇಲ್ಲ |
| | b) ಮುಂದಿನ ವಾರ್ಷಿಕ ಬಡ್ತಿ ದಿನಾಂಕ | ಹೌದು | ಇಲ್ಲ |
| | c) ವಾರ್ಷಿಕ ಬಡ್ತಿಗೆ ಅರ್ಹರೆ ಅಥವಾ ಇಲ್ಲವೇ | ಹೌದು | ಇಲ್ಲ |
| | d) ನಿವೃತ್ತಿ ದಿನಾಂಕ | ಹೌದು | ಇಲ್ಲ |
| | e) ನಿವೃತ್ತಿ ವೇತನ ವಿವರ | ಹೌದು | ಇಲ್ಲ |
| | 4. ನಿವೃತ್ತರಾಗಿದ್ದಲ್ಲಿ, ಖಾಯಂ ನಿವಾಸದ ವಿಳಾಸ ನೀಡಲಾಗಿದೆಯೇ | ಹೌದು | ಇಲ್ಲ |

*Compulsory and very essential

ಪಿ.ಆರ್.2981

ಸರ್ಕಾರದ ಪ್ರಧಾನ/ಕಾರ್ಯದರ್ಶಿ

## FOREST, ECOLOGY AND ENVIRONMENT SECRETARIAT

**Sub:** Diversion of 3.03 ha. of forest land in F.Sy.No. 142 of Sathanur Village and F.Sy.No. 82 of Thubinakere village in Balekatte Minor Forest area of Magadi Taluk for establishing 220/66 KV Sub-Station in favour of the Executive Engineer(Elect), Bangalore Major Works (North Division), Karnataka Power Transmission Corporation Limited, Bangalore.

**Read:**

1. Letter No. A5(5)GFL.CR.19/07-08, dated Nil-12-2008 of Principal Chief Conservator of Forests, Bangalore.
2. State Government letter No. FEE 150 FGL 2008, dated: 18-02-2009.
3. Letter No. 4-KRB 584/2009-BAN/4613, dated: 29-05-2009 of Government of India, Ministry of Environment and Forests, Regional Office, (South Zone), Bangalore.
4. State Government letter No. FEE 150 FGL 2008, dated: 29-10-2009.
5. Letter No. 4-KRB 584/2009-BAN/6022, dated: 09-11-2009 of Government of India, Ministry of Environment and Forests, Regional Office, (South Zone), Bangalore.
6. Letter No. A5(4) GFL.CR.19/07-08, dated: Nil-08-2010 of Principal Chief Conservator of Forests, Bangalore.
7. State Government letter No. FEE 150 FGL 2008, dated: 08-10-2010.
8. Letter No. 4-KRB 584/2009-BAN/8118 dated: 02-11-2010 of Government of India, Ministry of Environment and Forests, Regional Office (South Zone), Bangalore.

Preamble:

The Principal Chief Conservator of Forests, Bangalore vide his letter dated: Nil-12-2008 read at (1) above had submitted a proposal for diversion of 4.05 ha. of forest land in F.Sy.No.142 of Sathanur Village and F.Sy.No. 82 of Thubinakere village in Balekatte Minor Forest area of Magadi Taluk for establishing 220/66 KV Sub-Station in favour of the Executive Engineer (Elect), Bangalore Major Works (North Division), Karnataka Power Transmission Corporation Limited, Bangalore subject to certain conditions.

Accordingly, the proposal was recommended to Government of India, vide State Government letter dated: 18-02-2009 read at (2) above.

The proposal was rejected by Government of India, Ministry of Environment and Forests, Regional Office, South Zone vide their letter dated: 29-05-2009 as the activities proposed in the forest land were not site specific. Subsequently, a revised proposal for diversion of 3.03 ha. forest land with due justification for locating the project in forest area was recommended to Government of India vide State Government letter dated: 29-10-2009 read at (4) above.

The Government of India, Ministry of Environment and Forests, Regional Office, South Zone, Bangalore vide their letter dated 09-11-2009 read at (5) above conveyed its approval (Stage-I) for diversion of 3.03 ha. of forest land subject to fulfilment of certain conditions and the same was communicated to the Principal Chief Conservator of Forests, Bangalore for compliance.

The Principal Chief Conservator of Forests, Bangalore vide his letter dated Nil-08-2010 furnished the compliance report read at (6) above and the same has been sent to Government of India vide State Government letter dated: 08-10-2010 read at (7) above.

Government of India Ministry of Environment and Forests, Regional Office, South Zone, Bangalore vide their letter dated: 02-11-2010 read at (8) above has conveyed its approval (Stage-II) under Section-2 of Forest (Conservation) Act, 1980 for diversion of 3.03 ha. of forest land subject to certain conditions.

The Proposal has been examined in detail and hence the order.

**Government Order No. FEE 150 FGL 2008, Bangalore Dated: 02-12-2010**

In the circumstances explained in the preamble above, Government is pleased to accord approval under section (2) of Forest (Conservation) Act 1980 for diversion of 3.03 ha. of forest land in F. Sy. No. 142 of Sathanur Village and F.Sy.No.82 of Thubinakere village in Balekatte Minor Forest area of Magadi Taluk for establishing 220/66 KV Sub-Station in favour of the Executive Engineer (Elect), Bangalore Major Works (North Division), Karnataka Power Transmission Corporation Limited, Bangalore subject to the following conditions:

1. The legal status of forest land shall remain unchanged.
2. The Compensatory afforestation shall be raised over 3.03 ha. identified non-forest land in Sy.No.81 and 89 of Gangonhalli Village, Thippasandra Hobli, Magadi Taluk at the cost of user agency. The State Government shall obtain prior permission of Central Government for change of location and schedule of compensatory afforestation, if any.
3. Non-forest land for compensatory afforestation shall be notified by the State Government as P.F./R.F. and Nodal Officer (FCA) shall report the compliance within 6 months.
4. The additional amount of the Net Present Value(NPV) of the diverted forest land if any becoming due after revision of the same by the Hon'ble Supreme Court of India in future, shall be charged by the State Government from the user agency and the same shall be transferred to Ad-hoc CAMPA in account number CA-1582 of Corporation Bank, Block-II, CGO Complex, Phase 1, Lodhi Road, New Delhi.
5. Only minimum number of trees shall be cut based on actual requirement for laying the transmission line.

6. The total forest area utilised for the project shall not exceed 3.03 ha. In case the land is not taken over by the user agency or the same is not used for the stipulated purpose within period of two years, then the area shall be taken back by the Forest Department.
7. The land shall be utilized only for the purpose for which it is released.
8. If the land is not required for the purpose for which it is granted the same should be resumed back to the Forest Department by the Conservator of Forests under section 82 of the Karnataka Forest Act 1963.
9. The user agency has to pay the lease rent as fixed by the Government at the time of sanction and any subsequent orders in this regard.
10. The lease is granted for 20 years.
11. The Karnataka Forest Act 1963 and Rules 1969 will be applicable for any violation.
12. The user agency has to pay the cost of Compensatory Afforestation at the revised rate of Rs. 94,000/- per ha.
13. The user agency has to pay the Net Present Value as per Hon'ble Supreme Court of India Orders dated: 28-03-2008 and 09-05-2008.
14. Any other conditions to be imposed by the Government of India/Government of Karnataka/Principal Chief Conservator of Forests will be abided by the lessee.

By Order and in the name of the Governor of Karnataka

**H.M. Mallikarjuna Swamy**

Under Secretary to Government

Forest, Ecology and Environment Department

PR No. 2982

## FORESTS, ECOLOGY AND ENVIRONMENT SECRETARIAT

**Sub:** Diversion of 0.49 ha. of forest land in F.Sy.No.81 of Dongri(V) in respect of quarry lease for removal of sand on Gangavali river bed in favour of Sri. B.T. Nayak in Karwar Division.

**Ref:**
1. Letter No. A5 (6) GFL.CR.3/05-06, dated 14-03-2006 of the Principal Chief Conservator of Forests, Bangalore.
2. State Government letter No. FEE 39 FFM 2006, dated: 02-11-2006.
3. Government of India Ministry of Environment and Forests, Regional Office, South Zone, Bangalore letter No.4-KRB267/2006/BAN/1739, dated: 21st January 2008.
4. Letter No. A5(6) GFL., CR.03/05-06, dated: 23-06-2009 and A5 (3) GFL.CR. 111/07-08, dated: 26-06-2010 of the Principal Chief Conservator of Forests, Bangalore.
5. State Government letter No. FEE 143 FFM 2009, dated: 22-09-2010.
6. Government of India Ministry of Environment and Forests, Regional Office, South Zone, Bangalore letter No.4-KRB267/2006-BAN/8123, dated: 2nd November 2010.

Preamble:

The Principal Chief Conservator of Forests had sent proposal vide his letter dated: 14-03-2006 read at (1) above for diversion of 0.49 ha. of forest land in F.Sy.No.81 of Dongri (V) in respect of quarry lease for removal of sand on Gangavali river bed in favour of Sri. B.T. Nayak in Karwar Division subject to certain conditions.

The proposal of the Principal Chief Conservator of Forest was recommended to Government of India, Ministry of Environment and Forests, Regional Office, South Zone, Bangalore vide State Government letter dated: 02-11-2006 read at (2) above seeking prior approval of Government of India under section (2) of the Forest (Conservation) Act, 1980.

After careful consideration of the proposal of the State Government, Government of India vide its letter dated: 21st January 2008 read at (3) above has agreed in-principle (Stage-I) subject to the fulfillment of certain conditions.

In compliance of the conditions stipulated by Government of India vide its letter dated: 21st January 2008 the Principal Chief Conservator of Forests vide his letter dated: 23-06-2009 and 26-06-2010 read at (4) above has sent his compliance report. This compliance report was forwarded to Government of India vide State Government letter dated: 22-09-2010 read at (5) above.

Government of India vide its letter dated: 2nd November 2010 read at (6) above has conveyed its final approval (Stage-II) under Section 2 of the Forest (Conservation) Act, 1980 for diversion of 0.49 ha. of forest land subject to certain conditions. Hence the order.

**Government Order No. FEE 143 FFM 2009, Bangalore Dated: 03-12-2010**

In the circumstances explained above, Government is pleased to accord sanction under Section 2 of the Forest (Conservation) Act, 1980 for diversion of 0.49 ha. of forest land in F.Sy.No. 81 of Dongri (V) in respect of quarry lease for removal of sand on Gangavali river bed in favour of Sri. B.T. Nayak in Karwar Division subject to the following conditions.

1. Legal status of forest land shall remain unchanged.

